# ಕೊಡಗು ಸಂಗಾತಿ

B. A. Belliappa

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಗೌಡ ಕನ್ನಡದ ಏಕೈಕ ಪಾಕ್ಷಿಕ ಪತ್ರಿಕೆ

K.R.N.N. 240 ಸಂಪುಟ : 2 ಸಂಚಿಕೆ : 6 ಮಾರ್ಚ್ 16 ರಿಂದ 31-1998 ಪುಟಗಳು : 24 ರೂ. 5



ಶಿಥಿಲಾವಸ್ಥೆಯಲ್ಲಿರುವ ಕೊಡಗು ರಾಜನ ಕಾಲದ

ನಾಲ್ಕುನಾಡು ಅರಮನೆ

ಅರೆಭಾಷಿಕ ಸಾಂಸ್ಕೃತಿಕ ಸಮಿತಿ, "ಕೊಡಗು ಸಂಗಾತಿ" ಪಾಕ್ಷಿಕ ಪತ್ರಿಕೆ ಹಾಗೂ ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲಾ ಗೌಡ ಮಹಿಳಾ ಸಂಘಟನೆ ಮೈಸೂರು, ಇವರ ಸಂಯುಕ್ತ ಆಶ್ರಯದಲ್ಲಿ

## ಅರೆಭಾಷಿಕ ಸಾಂಸ್ಕೃತಿಕ ಕಾರ್ಯಕ್ರಮ ಹಾಗೂ
## ಕೊಡಗು ಸಂಗಾತಿ ಪತ್ರಿಕಾ ಪ್ರಥಮ ವಾರ್ಷಿಕೋತ್ಸವದ ಆಹ್ವಾನ ಪತ್ರಿಕೆ

ಅಧ್ಯಕ್ಷರು : **ಪೂಜಾರಿ ಎ. ಪೊಣ್ಣಪ್ಪ,**
ವಕೀಲರು ಮತ್ತು ನೋಟರಿ, ಬೆಂಗಳೂರು

ಮುಖ್ಯ ಅತಿಥಿಗಳು : **ಮುಕ್ಕಾಟಿ ಸಿ ವಾಸುದೇವ್**
ವಕೀಲರು ಮತ್ತು ನೋಟರಿ, ಮಾಜಿ ಪುರಸಭೆ ಅಧ್ಯಕ್ಷರು, ಮಡಿಕೇರಿ.

: **ಎನ್. ಎಸ್. ದೇವಿಪ್ರಸಾದ್**
ಪ್ಲಾಂಟರ್, ಅಧ್ಯಕ್ಷರು ಪ್ರಜಾವೇದಿಕೆ, ಕೊಡಗು ಜಿಲ್ಲೆ

ವಾರ್ಷಿಕ ಸಂಚಿಕೆ ಬಿಡುಗಡೆ : **ಶ್ರೀಮಾನ್ ವಾಸುರವರಿಂದ**
ಮಾಜಿ ಮೇಯರ್, ಮೈಸೂರು.

**ಸರ್ವರಿಗೂ ಆದರದ ಸ್ವಾಗತ**

ದಿನಾಂಕ : 12-4-98 ಭಾನುವಾರ ಸಮಯ : ಬೆಳಿಗ್ಗೆ 10.00 ಗಂಟೆಗೆ

ಸ್ಥಳ : **ಕಲಾಮಂದಿರ,** ಮೈಸೂರು.

ಅಧ್ಯಕ್ಷರು ಕಾರ್ಯದರ್ಶಿ

## 12-4-98ರ ಕಾರ್ಯಕ್ರಮಗಳು

1. ವೇದಿಕೆಗೆ ಅತಿಥಿಗಳನ್ನು ಕರೆತರುವುದು
2. ಪ್ರಾರ್ಥನೆ
3. ಸ್ವಾಗತ, ಮಾಲಾರ್ಪಣೆ, ಅತಿಥಿಗಳಿಗೆ ಸ್ಮರಣಿಕೆ ನೀಡುವುದು
4. ಪ್ರಾಸ್ತಾವಿಕ ಭಾಷಣ-ಅರೆಭಾಷಿಕ ಕಾರ್ಯಾಧ್ಯಕ್ಷರಿಂದ
5. ಕೊಡಗು ಸಂಗಾತಿ ನಡೆದುಬಂದ ದಾರಿ - ಸಂಪಾದಕರಿಂದ
6. ಅತಿಥಿಗಳಿಗೆ ಸನ್ಮಾನ, ವಾರ್ಷಿಕ ಸಂಚಿಕೆ ಬಿಡುಗಡೆ ಹಾಗೂ ಅವರಿಂದ ಹಿತವಚನ
7. ಚಿನ್ಹೆ ಬಿಡುಗಡೆ ಹಾಗೂ ಚಿನ್ಹೆ ತಯಾರಕರಿಗೆ ಸನ್ಮಾನ
8. ಮುಖ್ಯ ಅತಿಥಿಗಳ ಭಾಷಣ
9. ಕೊಡಗು ಸಂಗಾತಿಯು ಸನ್ಮಾನಿತರಿಗೆ ಸ್ಮರಣಿಕೆ ನೀಡುವುದು
10. ಪ್ರೇಕ್ಷಕರಿಂದ ಭಾಷಣ [ಒಬ್ಬರಿಂದ]
11. ಅಧ್ಯಕ್ಷರ ಭಾಷಣ
12. ವಂದನಾರ್ಪಣೆ

1-00 ಗಂಟೆಯಿಂದ 2-00 ಗಂಟೆಯವರೆಗೆ ಊಟ.
ನಂತರ ಸಾಂಸ್ಕೃತಿಕ ಕಾರ್ಯಕ್ರಮ

# ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :
**ಪಟ್ಟಡ ಪಿ. ಶೀಲಾಮಣಿ**

ಉಪ ಸಂಪಾದಕ :
**ಕಟ್ರತನ ಸಿ. ಜಯರಾಂ**

ಸಹ ಸಂಪಾದಕ :
**ಹುಲಿಮನೆ ರಮೇಶ್**

ವರದಿಗಾರ :
**ಪಟ್ಟಡ ಎಲ್. ಶಿವಕುಮಾರ್**

ಕಾರ್ಯ ನಿರ್ವಾಹಕಿ :
**ಕು|| ಗೀತಾ ಮೋಂಟಡ್ಕ**

ಪತ್ರಿಕಾ ಪ್ರತಿನಿಧಿ :
**ಕು|| ಧನು ಚೆರಿಯಮನೆ**

ಕಛೇರಿ ನಿರ್ವಹಣೆ :
**ಪಟ್ಟಡ ಪಿ. ದೀಪಕ್**
**ಹೊಸೊಕ್ಲು ಹರಿಣಿ ಬೆಳ್ಯಪ್ಪ**
**ಮಣ್ಣುಪುರ ಧರಣಿ ಗಣಪತಿ**

ಮುದ್ರಕರು :
**ಮಣ್ಣಂಡ್ರ ಕೆ. ತಮ್ಮಯ್ಯ**
**ಆಶೀರ್ವಾದ್ ಪ್ರಿಂಟರ್ಸ್,**

ಗೌರವ ಸಂಪಾದಕ :
**ಪಟ್ಟಡ ಎಂ. ಪ್ರಭಾಕರ್**

ಚಂದಾ ಕಳುಹಿಸುವ ಮತ್ತು
ಜಾಹೀರಾತು ಪ್ರಸಾರ ಕಛೇರಿ :

**ಕೊಡಗು ಸಂಗಾತಿ**
ನಂ. 35, **"ಸವಿತಾ ನಿಲಯ"**
1ನೇ ಕ್ರಾಸ್, 4ನೇ ಬ್ಲಾಕ್,
ಡಿವಿಜನಲ್ ಟೆಲಿಕಾಂ ಕಛೇರಿ ಹತ್ತಿರ,
ಜಯಲಕ್ಷ್ಮಿಪುರಂ, **ಮೈಸೂರು-12.**
ಫೋನ್ : **516771**


## ಒಳನೋಟ

ಪುಟಗಳು



## ಅರೆ ಭಾಷೆರ ವಿಭಾಗ



**ಚಂದಾ ವಿವರ**

| | | |
|---|---|---|
| ಬಿಡಿ ಪ್ರತಿ | : | 5 ರೂ. |
| ಅರ್ಧ ವಾರ್ಷಿಕ | : | 60 ರೂ. |
| ವಾರ್ಷಿಕ ಚಂದಾ | : | 120 ರೂ. |

## ಸಂಪಾದಕೀಯ :

### "ಮದುವೆ" ಎಂಬ ಶಾಸ್ತ್ರ

ಆದಿ ಮಾನವನ ಕಾಲದಲ್ಲಿ "ಮದುವೆ" ಎಂಬ ಶಾಸ್ತ್ರ ಇತ್ತಿಲ್ಲ. ಎಲ್ಲಾ ಪ್ರಾಣಿಪಕ್ಷಿಗಳಂತೆ ಮದುವೆ ಇಲ್ಲದೆ ಮಕ್ಕಳನ್ನು ಹಡೆಯುತ್ತಿದ್ದರು. ಮನುಷ್ಯ ನಾಗರೀಕತೆಯನ್ನು ಹೊಂದಿದ ಮೇಲೆ "ಮದುವೆ" ಎಂಬ ಶಾಸ್ತ್ರ ಪ್ರಾರಂಭವಾಯಿತು. ಈ ಶಾಸ್ತ್ರ ಪ್ರಾರಂಭವಾದ ಮೇಲೆ ಒಂದು ಗಂಡು ಅಥವಾ ಇನ್ನೊಂದು ಹೆಣ್ಣು ಯಾ ಗಂಡಿನೊಡನೆ ವಿವಾಹವಾದ ನಂತರ ದಾಂಪತ್ಯ ಜೀವನದಲ್ಲಿ ಹೆಣ್ಣಿಗೆ ಪರಪುರುಷನ ಸಂಬಂಧ ನಿಷೇಧಿಸಲ್ಪಟ್ಟಿತು. ಅದೇ ರೀತಿ ಒಬ್ಬ ಗಂಡಸು ತನ್ನ ಪತ್ನಿಯನ್ನಲ್ಲದೆ ಬೇರೆ ಸ್ತ್ರೀಯೊಡನೆ ದಾಂಪತ್ಯ ಜೀವನ ನಿಷೇದಿಸಲಾಯಿತು. ಮೊದಮೊದಲು ಇದು ಸಮಾಜದ ಕಟ್ಟುಪಾಡಾಗಿ ಕ್ರಮೇಣ ಅದು ಕಾನೂನಾಗಿ ಪರಿವರ್ತಿಸಲ್ಪಟ್ಟಿತು. ಈ ರೀತಿ ಪದ್ಧತಿ ಯಾ ಕಾನೂನಿಗೆ ವಿರೋಧವಾಗಿ ನಡೆದ ಗಂಡಸು ಯಾ ಹೆಂಗಸನ್ನು ಸಮಾಜ ಶಿಕ್ಷೆಗೆ ಗುರಿ ಮಾಡುತ್ತಿತ್ತು.

ಮದುವೆಯನ್ನು ಹಲವಾರು ಧರ್ಮಗಳು ಹಲವಾರು ರೀತಿಯಲ್ಲಿ ನಡೆಸಿಕೊಳ್ಳುತ್ತಾರೆ. ಆದರೆ ಹಿಂದೂ ಧರ್ಮದಲ್ಲಿ "ಮದುವೆ" ಶಾಸ್ತ್ರವನ್ನು ಬಹಳ ಪವಿತ್ರ ಹಾಗೂ ಪೂಜ್ಯ ಭಾವನೆಯಿಂದ ಕಾಣುತ್ತಾರೆ. ಹಿಂದೂ ಸಮಾಜ ಮಾತ್ರವಲ್ಲದೆ ಹಿಂದೂ ವಿವಾಹ ಕಾನೂನಿನಲ್ಲೂ ಸಹ ಹಿಂದೂ ವಿವಾಹದ ಸೂತ್ರಗಳನ್ನು ಅಳವಡಿಸಲಾಗಿದೆ. ಹಿಂದೂ ವಿವಾಹದ ಸಪ್ತಪದಿ ಮಂತ್ರದಲ್ಲಿ ಒಂದು ಸಲ ಮದುವೆ, ಏಳೇಳು ಜನ್ಮದಲ್ಲಿ ಅವಳೇ ಹೆಂಡತಿ, ಅವನೇ ಗಂಡನೆಂಬುದನ್ನು ಪ್ರಮಾಣವಾಗಿ ಒಪ್ಪಿಕೊಳ್ಳುತ್ತಾರೆ. ಮದುವೆಯಲ್ಲಿ ಕಟ್ಟಿದ ಮಾಂಗಲ್ಯ ಪವಿತ್ರವಾದುದು. ಗಂಡ ಸಾಯುವವರೆಗೂ ತಾಳಿ ಆ ಮದುವೆಯ ಚಿನ್ಹೆಯಾಗಿ ಉಳಿಯುತ್ತದೆ. ಗಂಡ ಸತ್ತ ವಿಧವೆ ತನ್ನ ಮಾಂಗಲ್ಯಭಾಗ್ಯಕ್ಕಾಗಿ ಗಂಡನನ್ನು ತನ್ನ ಜೀವಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತಾಳೆ ಹಾಗೂ ಅವನ ಕಲ್ಯಾಣಕ್ಕಾಗಿ ಶ್ರಮಿಸುತ್ತಾಳೆ.

ಆದರೆ ಈಗ ನವನಾಗರೀಕತೆಯ ಸೋಂಕಿನಿಂದ ಹಾಗೂ ಪಾಶ್ಚಾತ್ಯ ಅನುಕರಣೆಯಿಂದ ನಮ್ಮ "ಮದುವೆ"ಯ ಕಟ್ಟುಕಟ್ಟಳೆ ಸಡಿಲಗೊಂಡಿದೆ. ಬರುಬರುತ್ತಾ ಯುವಕ-ಯುವತಿಯರಲ್ಲಿ ವಿವಾಹ ವಿಚ್ಛೆದನೆಯ ಖಟ್ಲೆಗಳು ಹೆಚ್ಚುತ್ತಾ ಬರುತ್ತಿವೆ. ಅದರಲ್ಲೂ ವಿದ್ಯಾವಂತ ಯುವಕ ಯುವತಿಯರು ವಿಚ್ಛೇದನೆಯತ್ತ ಬಹಳ ತೀವ್ರ ಗತಿಯಿಂದ ಮುಂದಾಗುತ್ತಿದ್ದಾರೆ.

ಯುವಕ ಯುವತಿಯರಲ್ಲಿ ಪ್ರೀತಿ ಪ್ರೇಮಕ್ಕಿಂತ ಆಡಂಬರದ ಜೀವನದತ್ತ ಮನಸ್ಸು ತಿರುಗಿ ಅವರುಗಳು ಸ್ವೇಚ್ಛೆಯಾಗಿ ಓಡಾಡಲು ವಿವಾಹವೆಂಬುದು ಒಂದು ಸಂಕೋಲೆ ಎಂಬ ಭಾವನೆ ಬೆಳೆಯುತ್ತಿದೆ.

ಮದುವೆ ಎಂಬುದು ಪ್ರಾಣಿಗಳಿಗಿರುವ ರೀತಿಯ ತನ್ನ ಅಥವಾ ತಮ್ಮ ಕಾಮವಾಸನೆಗಾಗಿರುವುದೆಂಬ ಭಾವನೆ ಬೆಳೆಯುತ್ತಿದೆ. ಕುಟುಂಬ, ಸಂಸಾರವೆಂಬ ಭಾವನೆ ಹೊರಟು ಹೋಗುತ್ತಿದೆ. ಪತಿವ್ರತ, ಏಕಪತ್ನಿವ್ರತ, ಪ್ರೀತಿ ವಿಶ್ವಾಸಗಳಿಗೆ ಅರ್ಥವೇ ಇಲ್ಲ ಎಂಬ ಸ್ಥಿತಿಗೆ ತಲುಪಿದೆ. "ಈದಿನ ಪ್ರೀತಿಸು ನಾಳೆ ಮದುವೆಯಾಗು ನಾಡಿದ್ದು ವಿಚ್ಛೇದನಗೊಳ್ಳು" ಎಂಬ ರೀತಿಯದ್ದಾಗಿದೆ. ಇದು ಪಾಶ್ಚಾತ್ಯ ದೇಶಗಳಲ್ಲಿ ಸರ್ವಸಾಮಾನ್ಯವಾಗಿದೆ. ಕೆಲವು ದೇಶಗಳಲ್ಲಿ ಯುವಕ ಯುವತಿಯರಿಗೆ ಮದುವೆ ಇಲ್ಲದೆಯೇ ಸಂಸಾರಜೀವನ ನಡೆಸಿ, ಬೇಡದಿದ್ದಾಗ ಬೇರ್ಪಟ್ಟು ಹೋಗುವ ಸ್ಥಿತಿ ಇದೆ. ಈ ರೀತಿಯ ಈಗಿನ ಯುವಕ ಯುವತಿಯರಿಗೂ ಮೃಗ ಪಕ್ಷಿಗಳಿಗೂ ವ್ಯತ್ಯಾಸವೇನು? ಇಂತಹ ಆಚಾರ-ವಿಚಾರಗಳಿಂದ "ಏಯಿಡ್ಸ್" ರೋಗದಂತಹ ಭೀಕರ ರೋಗ ಸಮಾಜಕ್ಕೆ ತಟ್ಟದೆ ಹೋದೀತೇ?

ಇದಕ್ಕೆಲ್ಲಾ ಧನ್ವಂತರಿ ಔಷಧಿ ಅಂದರೆ ನಮ್ಮ ಪ್ರಾಚೀನ ಸಂಸ್ಕೃತಿಯ ವಿವಾಹ ಪದ್ಧತಿಯೇ ಅಲ್ಲವೆ? ಶ್ರೀ ಸ್ವಾಮಿ ವಿವೇಕಾನಂದರು ಸುಮಾರು ನೂರು ವರ್ಷಗಳ ಹಿಂದೆ ಈ ರೀತಿ ಹೇಳಿದ್ದಾರೆ. "ಪಾಶ್ಚಿಮಾತ್ಯ ಸಮಾಜವನ್ನು ಹೊರಗಿನಿಂದ ನೋಡಿದರೆ ತಳುಕಿನಿಂದ ಶೋಭಿಸುತ್ತದೆ. ಆದರೆ ಒಳಹೊಕ್ಕು ನೋಡಿದರೆ ಆ ಸಮಾಜಗಳು ಕೀವಾಗಿ ದುರ್ವಾಸನೆ ಬರುತ್ತವೆ. ಆದರೆ ಭಾರತದಲ್ಲಿ ಹೊರಗಿನಿಂದ ನೋಡಿದರೆ ಹರಕಲು ಗುಡಿಸಲುಗಳು ಕಂಡರೂ ಅದರೊಳಗೆ ನೋಡಿದರೆ ಪ್ರೀತಿ ವಾತ್ಸಲ್ಯದ ಶಾಂತಿಯುತ ಸಹಬಾಳ್ವೆಯನ್ನು ಕಾಣಬಹುದು.

ಈ ರೀತಿ ಸಮಾಜದ ಅಧೋಪತನಕ್ಕೆ ಎಡೆ ಮಾಡಬಾರದೆಂದು ನಮ್ಮ ಸಮಾಜದ ಸರ್ವರಲ್ಲೂ ಸಂಗಾತಿಯು ಮನನೊಂದು ಬೇಡಿಕೊಳ್ಳುತ್ತಿದೆ. ●

# ಕೊಂಪುಳಿ ಅಪ್ಪಣ್ಣ ಸೋಮಪ್ಪ

ಜನ್ಮದಲ್ಲಿ ಮಾನವ ಜನ್ಮ ದೊಡ್ಡದೆಂದು ಹೇಳುತ್ತಾರೆ. ಇದರ ಸತ್ಯಾಂಶ ಮಾನವನ ಜೀವನದಲ್ಲಿ ತಾನು ಮಾಡಿದ ಪರೋಪಕಾರ ಮತ್ತು ಸ್ವಾರ್ಥ.

ಕೊಂಪುಳಿ ಅಪ್ಪಣ್ಣ ಸೋಮಪ್ಪ ಎಂಬುವರು ಒಬ್ಬ ನಿವೃತ್ತ ಪೋಲೀಸ್ ಅಧಿಕಾರಿ. ತನ್ನ ತಾಯಿಯನ್ನು ತನ್ನ ಒಂದೂವರೆ ವರ್ಷದ ಪ್ರಾಯದಲ್ಲಿ ಕಳೆದುಕೊಂಡರು.

ಕೊಂಪುಳಿ ಅಪ್ಪಣ್ಣ ಸೋಮಪ್ಪನವರು ತನ್ನ ವಿದ್ಯಾಭ್ಯಾಸವನ್ನು ಕೊಟ್ಟೂರು ಶಾಲೆಯಲ್ಲಿ 7ನೇ ತರಗತಿಯನ್ನು ಪೂರ್ಣಗೊಳಿಸಿದರು. ಪ್ರೌಢಾಭ್ಯಾಸವನ್ನು ಮಡಿಕೇರಿ ಸೆಂಟ್ರಲ್ ಹೈಸ್ಕೂಲ್‌ನಲ್ಲಿ ಮುಗಿಸಿದರು. ವಸತಿಗಾಗಿ ಮಡಿಕೇರಿ ಗೌಡ ಹಾಸ್ಟೆಲ್‌ನಲ್ಲಿ ಸೇರ್ಪಡೆಯಾದರು. SSLC ಮುಗಿಸಿ ಹೆಚ್ಚಿನ ವಿದ್ಯೆಗಾಗಿ ಹೊರಗೆ ಹೋಗಿ B.A. ಪಾಸು ಮಾಡಿದರು.

ಅಂದು ಬ್ರಿಟಿಷರ ಸಾಮ್ರಾಜ್ಯ. ಕಾರ್ಯ ದಕ್ಷತೆ, ಶಿಸ್ತು ಇವುಗಳಿಗೆ ಮಹತ್ವವಿದ್ದ ಕಾಲ. ಅಂದಿನ ಕಾಲದಲ್ಲಿ ಸಹಾಯಕ ಕಮಿಷನರಾಗಿ ರಾವ್ ಬಹದ್ದೂರ್ ಕೋಡಿರ ತಮ್ಮಯ್ಯ ಉತ್ತಪ್ಪನವರು ಕಾರ್ಯ ನಿರ್ವಹಿಸುತ್ತಿದ್ದರು. ಸೋಮಪ್ಪನವರು ಕೆ. ಟಿ. ಉತ್ತಪ್ಪನವರಲ್ಲಿ ಕೆಲಸಕ್ಕಾಗಿ ಸಂದರ್ಶನ ಬಯಸಿದರು.

ಕೊಂಪುಳಿ ಅಪ್ಪಣ್ಣ ಸೋಮಪ್ಪನವರ ಮೈಕಟ್ಟು, ದೇಹದಾರ್ಢ್ಯ, ಮಾತು ಅಂದಿನ ಸಹಾಯಕ ಕಮಿಷನರ್ ಕೆ.ಟಿ. ಉತ್ತಪ್ಪನವರನ್ನು ಆಕರ್ಷಿಸಿತು. ಹೆಚ್ಚಿಗೆ ಪ್ರಶ್ನೋತ್ತರಗಳಾಗಲಿಲ್ಲ.

ಉತ್ತಪ್ಪನವರು ಸೋಮಪ್ಪನವರನ್ನು ಒಮ್ಮೆ ನೋಡಿ ಹೀಗೆಂದರು "ಸೋಮಪ್ಪ, ನಿನ್ನನ್ನು ಪೋಲೀಸ್ ಸಬ್ ಇನ್ಸ್‌ಪೆಕ್ಟರಾಗಿ ನೇಮಿಸಿದ್ದೇನೆ. ನಿನ್ನ ಕರ್ತವ್ಯವನ್ನು ದೇವರು ಮೆಚ್ಚುವ ಹಾಗೆ ಮಾಡು, ಕಾವೇರಮ್ಮ ನಿನ್ನನ್ನು ಆಶೀರ್ವದಿಸಲಿ" ಎಂದರು. ದೊಡ್ಡವರ ಕಳಂಕ ರಹಿತ ಮಾತಿನ ಗಾಂಭೀರ್ಯ ಇಲ್ಲಿ ಕಾಣಬಹುದು. ಬಹುಷಃ ನಮ್ಮ ಗೌಡ ಜನಾಂಗದಲ್ಲಿ ಈ ಕಾರ್ಯಕ್ಕಿಳಿದ ಸಬ್ ಇನ್ಸ್‌ಪೆಕ್ಟರಲ್ಲಿ ಇವರೇ ಪ್ರಥಮರು ಎನ್ನಬಹುದು. ಇದು ನನ್ನ ಅನಿಸಿಕೆ. ನಂತರ ಇವರನ್ನು ಮದ್ರಾಸ್ [ಚೆನ್ನೈ] ಪ್ರಾಂತ್ಯದ ವೆಲ್ಲೂರಿಗೆ ಪೋಲಿಸ್ ತರಬೇತಿಗಾಗಿ ಕಳುಹಿಸಿದರು. ತರಬೇತಿಯ ನಂತರ ಮಡಿಕೇರಿಯಲ್ಲಿ ಪೋಲೀಸ್ ಸಬ್‌ಇನ್ಸ್‌ಪೆಕ್ಟರ್ ರಾಗಿ ನೇಮಕಗೊಂಡು ಕಾರ್ಯ ನಿರ್ವಹಿಸಿದರು.



ಕೊಂಪುಳಿ ಅಪ್ಪಣ್ಣ ಸೋಮಪ್ಪ

ಸಂಸಾರಕ್ಕಾಗಿ ಕುಂಞಾಳಿ ಪುಟ್ಟಯ್ಯ ಜಯಲಕ್ಷ್ಮಿಯನ್ನು ಗೃಹಲಕ್ಷ್ಮಿಯಾಗಿ ಸ್ವೀಕರಿಸಿದರು. ಲಕ್ಷ್ಮಿಯನ್ನೂ ಒಲಿಸಿದರು. ಸಂಸಾರ ಸಾಂಗವಾಗಿ ನಡೆಯಿತು.

ಗಂಡ ಹೆಂಡಿರ ಒಳಗಿನ ಪ್ರೇರಣೆಯೋ ಏನೊ ಆಧ್ಯಾತ್ಮಿಕದತ್ತ ಒಲವು ಮೂಡಿತು. ಇದು 1962ರಲ್ಲಿ ಅವರಿಬ್ಬರ ಜೀವನದಲ್ಲಿ ಆದ ಬದಲಾವಣೆ. ಅದರ ಪರಿಣಾಮ ಅವರಲ್ಲಿ ದಯೆ ಮೂಡಿತು. ಪೋಲಿಸ್ ದರ್ಪ ಇಳಿಯಿತು. ತನ್ನ ಸಮಾಜಕ್ಕೆ, ಸಾರ್ವಜನಿಕರಿಗೆ ತನ್ನ ಋಣ ತೀರಿಸಲು ಮುಂದಾದರು. ಪೋಲೀಸ್ ಸೇವೆಯನ್ನು ಸಬ್‌ಇನ್ಸ್‌ಪೆಕ್ಟರ್ ರಿಂದ ಆರಂಭಿಸಿ ಡೆಪ್ಯೂಟಿ ಸುಪರಿನ್‌ಟೆಂಡೆಂಟ್ ಆಫ್ ಪೋಲೀಸ್ ಆಗಿ ನಿವೃತ್ತಿ ಹೊಂದಿದರು.

ಸಾರ್ವಜನಿಕ ಸೇವೆಯಲ್ಲಿ ಬೆಟ್ಟತ್ತೂರು ಶಾಲೆಗೆ ಒಂದು ಕೊಠಡಿಯನ್ನು ನಿರ್ಮಿಸಿದರು. 'ಅಶ್ವಿನಿ' ಭಾಗಮಂಡಲಕ್ಕೆ ತಮ್ಮ ಕೈಲಾದ ಕಾಣಿಕೆ ನೀಡಿದರು. ಕುಶಾಲನಗರ ಗೌಡ ಕಲ್ಯಾಣ ಮಂಟಪಕ್ಕೆ ಮರ, ಹಣ, ತನ್ನ ದುಡಿಮೆಯನ್ನರ್ಪಿಸಿ ಇಂದು ಅದರ ಅಧ್ಯಕ್ಷರಾಗಿ ಇನ್ನೂ ಸೇವೆ ಸಲ್ಲಿಸುತ್ತ ಇರುವರು. ತೀರ್ಥಯಾತ್ರೆ ಅವರಿಗೊಂದು ಆನಂದ, ಆಧ್ಯಾತ್ಮಿಕ ಔತಣ. ಹಾಗಾಗಿ ಉತ್ತರ ಮತ್ತು ದಕ್ಷಿಣ ಭಾರತದ ಅನೇಕ ಪೂಜಾಮಂದಿರಗಳಿಗೆ ಭೇಟಿ ಕೊಟ್ಟಿರುವರು. ಅವರ ಮನೆಯೇ ಒಂದು ಪೂಜಾಮಂದಿರ. ಅವರ ಪೂಜೆಕೋಣೆಯೇ ಅದರ ಗರ್ಭಗುಡಿ.

ನಮ್ಮ ಗೌಡ ಜನಾಂಗದ ಯುವಕ ಯುವತಿಯರಿಗೆ ಇವರ ಜೀವನಕ್ರಮ ಮಾರ್ಗದರ್ಶನವಾಗಬೇಕು. ವಿದ್ಯೆಯ ಮಹತ್ವ, ಶಿಸ್ತಿನ ಗೌರವ, ಆಧ್ಯಾತ್ಮಿಕ ಬಲ ಸಾರ್ವಜನಿಕ ಕಾರ್ಯ ಇವರಿಂದ ಪ್ರಚೋದಿಸಲ್ಪಟ್ಟಿದೆ.

ಬೀಡಿ, ಸೀಗರೇಟು, ಗುಟ್ಕಾ, ಮದ್ಯಪಾನ, ಟಿ.ವಿ. ಸಿನಿಮಾ ನಟನಟಿಯರ ಅನುಕರಣೆಗೆ ಬಲಿಯಾಗಿ ಅಲ್ಪಸಂತೋಷ ಪಡುವುದರ ಬದಲು ಹಿರಿಯರ ಸೇವೆ, ಸಮಾಜ ಸೇವೆಯಲ್ಲಿ ನಮ್ಮ ಯುವ ಜನಾಂಗ ನಿರತರಾದರೆ ನಮ್ಮ ಜನಾಂಗ ಉನ್ನತಿಗೇರಬಹುದು. ಯುವಕ ಯುವತಿಯರು ಏನನ್ನುವರೋ?

● ಚೇಂದ್ರಿಮಾಡ ಜಿ. ಮುತ್ತಪ್ಪ
ಕುಶಾಲನಗರ

# ಹೆಸರಿನಲ್ಲೇನಿದೆ ?

"ವಾಟ್ ಈಸ್ ಇನ್ ಎ ನೇಮ್?" "ಆಫ್‌ಕೋರ್ಸ್ ಲೆಟರ್ಸ್" ಹೌದು ಶೇಕ್ಸಪಿಯರ್ ಕೂಡ ಯಾವುದೋ ನಾಟಕದಲ್ಲಿ ಹೀಗೆಯೇ ಕೇಳಿದ್ದಾನೆ. "ವಾಟ್ ಈಸ್ ಇನ್ ಎ ನೇಮ್, ಆಫ್ಟಾಲ್?" ಅಂತ ನಾಟಕ ಯಾವುದು ?

"ಹೋಗಲಿ ಬಿಡಿ ಹೆಸರಿನಲ್ಲೇನಿದೆ ?" ಏನೋ ಒಂದು ಹೆಸರೂಂತ ಇದ್ದರೂ ಅದನ್ನು ಕಟ್ಟಿಕೊಂಡು ನಾವೇನು ಮಾಡೋ ಹಾಗಿದೆ. ಅಲ್ವಾ ?

ಹಾಗಂತ ಬಿಡೋ ಹಾಗೂ ಇಲ್ಲ ನೋಡಿ.ಏಕೋ ಏನೋ ಈ 'ಹೆಸರಿ'ನ ವಿಚಾರ ತಲೆ ತಿನ್ನುತ್ತೆ. ನೀವು ಯಾರ ಹೆಸರನ್ನೇ ತೆಗೆದುಕೊಳ್ಳಿ ಅದು ಅವರ ವ್ಯಕ್ತಿತ್ವದ ನಿಜಸ್ಥಿತಿಗೆ ಸರಿಹೊಂದುವುದು ಬೆರಳೆಣಿಕೆಯಷ್ಟು. ಹೆಚ್ಚಾಗಿ ತದ್ವಿರುದ್ಧವೆ. ಬೇಕಾದರೆ ಕೆಲ ಸ್ಯಾಂಪಲ್‌ಗಳನ್ನು ನೋಡಿ.

ಇವನನ್ನು ನೋಡಿ. ಕೀಸೆ ಯಾವತ್ತೂ ಭರ್ತಿಯಾಗಿದ್ದಿಲ್ಲ. ಹೆಸರು 'ಸಂಪತ್‌ಕುಮಾರ್' ಅಂತ. ಮಹಾಬಲೇಶ್ವರನಿಗೆ 'ಬಲ' ಇರುವುದು ನಿಜವಾದರೂ ಆತನೇ ಇಲ್ಲಿರುವವರಲ್ಲೆಲ್ಲಾ ಬಲಾಢ್ಯನೇನಲ್ಲಾ.

'ಸೌಂಧರ್ಯ' ಅಂತ ಹೆಸರಿಟ್ಟುಕೊಂಡು ನೋಡಲು ಮರದ ಕೊಂಬಿನ ಹಾಗಿದ್ದರೆ ಏನು ಚಂದ ಹೇಳಿ.ಇವಳು ತ್ರಿವೇಣಿ ಆದರೆ ಪಾಪ ಆಕೆಗೆ "ಮೂರು ಜಡೆ"ಗಳಿರಲಿ,ಒಂದು ಜಡೆ ಹಾಕಬೇಕೆಂದುಕೊಂಡರೂ ಕೂದಲಿಲ್ಲ.

ಇವಳು "ಸೌಮ್ಯ" ಬಾಯಿ ತೆರೆಯುವವರೆಗೆ ಮಾತ್ರ ಇವಳ ಸೌಮ್ಯ ಕಂಡುಬರುತ್ತದೆ. ನಿಮಗೆ ನಂಬಿಕೆ ಬರದಿದ್ದಲ್ಲಿ ನೋಡಿ ಇಲ್ಲವೇ ! ಆಕೆಯ ಗಂಡನನ್ನು "ಯಾಕಯ್ಯ ತೆಳ್ಳಗಾಗಿದ್ದಿ?" ಅಂತ ಕೇಳಿದರೆ "ಐ ಯಾಮ್ ಆನ್ ಮ್ಯಾರಿಡ್ ಮ್ಯಾನ್ಸ್ ಡೈಟ್"! ಅಂದ "ಹಾಂಗೆದರೇನಯ್ಯ ಸ್ವಲ್ಪ ಒರಟಾದರೂ ಪರವಾಗಿಲ್ಲ. ಆದರೆ, ಹೀಗೆ ಒಗಟಾಗಿ ಮಾತಾಡಬೇಡ" ಎಂದೆ. ಅವ ಉತ್ತರಿಸಿದ "ಐ ನೆವರ್ ಈಟ್, ವೈಲ್ ಶಿ ಈಸ್ ಟಾಕಿಂಗ್" ಅರ್ಥವಾಯ್ತುತಾನೆ? ಆಕೆ ಬಾಯಿ ತೆರೆದರೆ ಬೊರ್ಗರೆಯುವ ಜಲಪಾತ ಯಾವಾಗಲೂ ವಟವಟ ಅಂತಿರುತ್ತಾಳೆ.

ಇದೊಳ್ಳೆ ಕಥೆಯಾಯ್ತು ! ಹಾಗೆ ಹೇಳುತ್ತಾ ಹೋದರೆ ಯಾರೂ ತಮ್ಮ ಹೆಸರಿಗೆ ತಕ್ಕಂತೆ ಇರುವುದೇ ಇಲ್ಲ. ಏನೋ ಕರಿಯಲಿಕ್ಕೆ, ಗುರ್ತಿಸಲಿಕ್ಕೆ ಒಂದು ಹೆಸರೂಂತ ಇದ್ದರೆ ಆಯ್ತಪ್ಪ. ಅದಕ್ಕೆ ಯಾಕೆ ಅಷ್ಟು ತಲೆ ಕೆಡಿಸಿಕೊಳ್ಳಬೇಕು ? "ಆದರೂ ಹೆಸರು ಚಿನ್ನ ಮುಸುಡಿ ಕೋಡಂಗಿ" ಅಂತಾದರೆ ಎನುಚೆನ್ನ ಹೇಳಿ? "ಓಹೋ ಮುಖ ಅಂತೂ ಚೆನ್ನಾಗಿಲ್ಲ ಹೆಸರಾದರೂ ಒಂದು ಚೆಂದದ್ದಿರಲಿ ಬಿಡಿ ಅಂತ" ಬರಿ ಚೆಂದದ ಹೆಸರಿನಿಂದ ಏನೂ ಪ್ರಯೋಜನ ಇಲ್ಲ. ಚಪ್ಪಲಿ ಚೆನ್ನಾಗಿದೆ ಅಂತ ಯಾರೂ ಅದನ್ನು ತಲೆಯಲ್ಲಿಟ್ಟುಕೊಳ್ಳಲ್ಲ ಅಲ್ಲವೇ ?

"ಇದ್ದರೆ ಹೆಸರಿಗೆ ತಕ್ಕಂತೆ ನೀವಿರಬೇಕು, ಇಲ್ಲ......" "ಹಾಗಾದ್ರೆ ನಿಮ್ಮ ಹೆಸರು ನಿಮಗೆ ಸರಿಯಾಗಿದೆಯೇ ?

ಹಿಂದಿ ವಾರ್ತೆ ಓದುವಾಕೆ 'ಸರಳ ಮಹೇಶ್ವರಿ'ಯನ್ನು ನೋಡಿದ್ದೀರಲ್ಲಾ? ಆಕೆ ಮಾತ್ರ ಹೆಸರಿಗೆ ತಕ್ಕ ಹಾಗೆ ಇದ್ದಾಳೆ ಅನ್ನುತ್ತೆ. "ಶಿ ಈಸ್ ಕ್ಯೈಟ್ ಅಂಡ್ ಸಿಂಪಲ್"

ನೀವು ಏನೇ ಅನ್ನಿ ಈ "ನಾಮಕರಣ"ದ ವಿಷಯ ಬಂದಾಗ ಎಲ್ಲರೂ ತಲೆ ಕೆಡಿಸಿಕೊಳ್ಳುವವರೆ. ಮೊನ್ನೆ ಗೆಳತಿಯೊಬ್ಬಳು ತನ್ನ ಅಕ್ಕನ ಮಗುವಿಗೆ 'ಡ' ಕಾರ [ಶಾಸ್ತ್ರದ ಪ್ರಕಾರ] ದ ಒಂದು ಹೆಸರನ್ನಿಡಬೇಕು ಅಂತ ಒಳ್ಳೆಯ ಹೆಸರನ್ನು ಸೂಚಿಸಲು ಹೇಳಿದರು. ಆ ಅಕ್ಷರದಲ್ಲಿ ಬರಿ ವಿಚಿತ್ರ ಹೆಸರುಗಳೇ ಇರುವುದೆಂದು ತಿಳಿದಾಗ ಪರವಾಗಿಲ್ಲ, ಮನೆಯಲ್ಲಿ ಕರಿಯಲಿಕ್ಕಷ್ಟೆ 'ಡ' ಕಾರದ್ದಿರಲಿ, ಚೆಂದದ ಹೆಸರು ಶಾಲೆಗೆ ಕೊಟ್ಟರಾಯ್ತು ಎಂದರು. ಆದರೆ ಡಾಲಿ, ಡಯಾನ ಹಳೆಯ ಹೆಸರುಗಳೆಂದು ಬಿಟ್ಟಿದ್ದಾಯ್ತು. ಡಬರಿ, ಡಂಗುರ ನೆನಪಿಗೆ ಬಂದರೂ ಹೇಳುವ ಧೈರ್ಯ ಮಾಡಲಿಲ್ಲ. ಆದರೆ ನಮ್ಮ ಸಮಸ್ಯೆಗೆ ಉತ್ತರ ಅಡುಗೆ ಮನೆಯಲ್ಲಿ ಸಿಕ್ಕಿತು. 'ತುಷಾರ' ಎಂಬ ವನಸ್ಪತಿ ಬ್ರಾಂಡಿನ ಹೆಸರು ತಿಳಿದಾಗ 'ತುಷರ' ಎಂದಿಡೋಣ, ಅಂತಾಯ್ತು. ಮತ್ತೆ 'ಡ' ಕಾರಕ್ಕೆ ಮೋಸವಾಗಬಾರದಲ್ಲ ಡಾಲ್ಡ(dalda) ಎಂದು ಕರೆಯುವುದು ಎಂದಾಯ್ತು.

ಇಲ್ಲೊಬ್ಬರು ತಮ್ಮ ನಾಯಿಗೆ "ಟೈಗರ್"! ಅಂತ ಹೆಸರಿಟ್ಟಿರುತ್ತಾರೆ. ನಮ್ಮಲ್ಲಿ 'ಬೇಬಿ' ಅನ್ನೋದು ಕೂಡ ಒಂದು ಹೆಸರಾಗಿ ರೂಢಿಯಲ್ಲಿ ಬಂದುಬಿಟ್ಟಿದೆ. ಆಕೆಗೆರಡು 'ಬೇಬಿ'ಗಳಾದರೂ ಆಕೆ 'ಬೇಬಿ'(Baby) ಎಂದೇ ಕರೆಯಲ್ಪಡುತ್ತಾಳೆ.

ನಿಮಗೆ ಈ ವಿಷಯ ಗೊತ್ತೆ? ಉತ್ತರ ಕರ್ನಾಟಕದ ಮಂದಿ "ಅನಾನಸ್"(Pineaple)ಗೆ 'ಪರಂಗಿ' ಅಂತಾರೆ ಮತ್ತು ದಾವಣಗೆರೆಯಲ್ಲಿ 'ಸಿಹಿ ಗುಂಬಳ' ಕ್ಕೆ 'ಪರಂಗಿ' ಅಂತಾರೆ. 'ಮಂಗಳೂರು' ಕಡೆ ಒಂದು ವಿಧದ ಮೀನಿಗೆ 'ಭೂತಾಯಿ' ಅಂದರೆ, ಮೈಸೂರ ಜನ ತಮ್ಮ ಹೊಲ ತೋಟಗಳಿಗೆ 'ಭೂತಾಯಿ' ಅಂತಾರೆ. ಎಷ್ಟೆಲ್ಲಾ ಆಭಾಸವಾಗುತ್ತದೆ ಅಲ್ವಾ ? ಅದಕ್ಕೆಂದೆ

6ನೇ ಪುಟ ನೋಡಿ

# ಗೌಡರ ವಿವಾಹ ಪದ್ಧತಿ

[ಹಿಂದಿನ ಸಂಚಿಕೆಯಿಂದ[

**ತುಪ್ಪ ತೆಗೆದುಕೊಂಡು ಹೋಗುವ ಕ್ರಮ :**

ವಿವಾಹ ಕಳೆದ 3/5ನೇ ಇಲ್ಲವೇ 8ನೇ ದಿನ ಮದುಮಕ್ಕಳು ತಮ್ಮ ಮದುವೆ ಪೋಷಾಕಿನಲ್ಲಿ ಊರಿನ ಮುಖ್ಯಸ್ಥರು ಮತ್ತು ಇತರ ಬಾಂಧವರೊಂದಿಗೆ 5-7 ಜನರ ಈ ಸಮೂಹವು ಸಂಜೆಯ ಹೊತ್ತಿನಲ್ಲಿ ವಧುವಿನ ಮನೆ ಹತ್ತುವುದು. ವಧುವಿನ ಕೈಯಲ್ಲಿ ತುಪ್ಪದ ಚೆಂಬು ಮತ್ತು ಜೋಡಿ ತೆಂಗಿನಕಾಯಿ ಇರತಕ್ಕದ್ದು. ಮನೆ ಹತ್ತಿಸಿದ ನಂತರ ತುಪ್ಪ ಮತ್ತು ತೆಂಗಿನ ಕಾಯಿಯನ್ನು ನೆಲ್ಲಕ್ಕಿ ಅಡಿಯಲ್ಲಿ ಇಟ್ಟು, ಹಸೆಗೆ ಸರಿಯಾಗಿ ಕೂರಿಸುವರು. ಈ ಸಮಯದಲ್ಲಿ ಮದುವೆಗೆ ಬಾರದೆ ಇದ್ದ ಕೆಲವರು ಅವರಿಗೆ ಅಕ್ಕಿ ಹಾಕಿ ಉಡುಗೊರೆ ಕೊಟ್ಟು ಆಶೀರ್ವದಿಸುವುದೂ ಇದೆ. ತದನಂತರ ಮದುಮಕ್ಕಳನ್ನು ಹಸೆಯಿಂದ ಏಳಿಸಿ ತುಪ್ಪ ನೋಡುವ ಕ್ರಮ ಮಾಡುವರು. ತುಪ್ಪದ ಚೆಂಬಿನ ಮೇಲೆ ಕಟ್ಟಿದ ಎಲೆಯನ್ನು ಬಿಚ್ಚುವರು. ಆಗ ಕಟ್ಟಿದ ಹಗ್ಗಕ್ಕೆ ಗಂಟು ಬೀಳದಂತೆ ಎಚ್ಚರ ವಹಿಸಿ ಕಟ್ಟಿರುವರೊ ಎಂದು ಪರೀಕ್ಷಿಸುವರು. [ತುಪ್ಪದ ಚೆಂಬಿಗೆ ಕಟ್ಟುವ ಹಗ್ಗ ಗಂಟು ಬೀಳಬಾರದು ಎಂದು ಪದ್ಧತಿ] ತುಪ್ಪವನ್ನು ದೇವರ ದೀಪಕ್ಕೆ ಹುಯಿದು ದೀಪ ಹಚ್ಚುವುದು. ಊಟದ ಸಮಯದಲ್ಲಿ ಎಲ್ಲರಿಗೂ ಬಡಿಸುವುದು. ಈ ಸಮಯದಲ್ಲಿ ಒಂದು ಹೆಸರು ಹೇಳದ ಚಿಟ್ನಿ ಮಾಡಿರುತ್ತಾರೆ. ಎಲ್ಲರಿಗೂ ಬಡಿಸಿ ಆದ ನಂತರ ಊಟ ಮಾಡಿ ಏಳುವುದಕ್ಕೆ ಮೊದಲು ಮದುಮಕ್ಕಳು ಊಟಕ್ಕೆ ಬಡಿಸಿದ ಚಿಟ್ನಿಯ ಹೆಸರು ಹೇಳಿ ಏಳಬೇಕು ಎಂದು ಚಿಟ್ನಿ ಬಡಿಸಿದ ವಧುವಿನ ಅಕ್ಕತಂಗಿಯರು ಹೇಳಿ ಊಟ ಮಾಡುವುದಕ್ಕೆ ಅನುಮತಿಯನ್ನು ಕೊಡುತ್ತಾರೆ. ಅದಕ್ಕೆ ತಪ್ಪಿದಲ್ಲಿ ತಪ್ಪು ಕಟ್ಟಬೇಕು ಎಂದೂ ಹೇಳುತ್ತಾರೆ. ಚಟ್ನಿಯ ಹೆಸರು ಹೇಳದಿದ್ದಲ್ಲಿ ತಮಾಷೆಗಾಗಿಯಾದರೂ ತಪ್ಪುಹಾಕುವರು. ಅಂದು ಅಲ್ಲಿಯೇ ತಂಗಿದ್ದು ಮರುದಿನಬೆಳಗಿನ ಉಪಹಾರ ಸ್ವೀಕರಿಸಿದ ನಂತರ ಹಿಂತಿರುಗುವರು.

**ಹತ್ತು ಉಳಿಯುವುದು :**

ತುಪ್ಪದ ಶಾಸ್ತ್ರ ಮುಗಿಸಿ ಮನೆಗೆ ಮರಳಿದ ಮದುಮಗಳು ಕೆಲ ದಿನಗಳಲ್ಲಿ ತನ್ನ ತಂದೆ ತಾಯಿ ಅಣ್ಣ ತಮ್ಮಂದಿರ ಸಹವಾಸದಿಂದ ದೂರವಾಗಿ ಪತಿಯ ಮನೆಯೂ ಒಮ್ಮೆಗೆ ಒಗ್ಗದೇ ಇರಬಹುದು. ಇದರಿಂದ ಹೆಣ್ಣಿನ ಮನಸ್ಸಿಗೆ ಬೇಸರವಾಗಬಾರದು ಎಂದು ಹುಡುಗಿಯನ್ನು ಹುಡುಗಿಯ ಮನೆಯವರು ಬಂದು ಕರೆದುಕೊಂಡು ಹೋಗುವರು. ಅವಳ ತವರಿನಲ್ಲಿ ಕೆಲವು ದಿನಗಳು ಕಳೆದ ನಂತರ ಹುಡುಗನ ಕಡೆಯವರು ಇಲ್ಲವೇ ಹುಡುಗನೇ ಬಂದು ಕರೆದುಕೊಂಡು ಹೋಗುವುದು.

**ಆಟಿ ಕೂರುವ ಕ್ರಮ :**

ಆಟಿ ಇದು ಕನ್ನಡದ ಕರ್ಕಾಟಕ ತಿಂಗಳು. ಈ ತಿಂಗಳು ವರ್ಷದ ಎಲ್ಲಾ ತಿಂಗಳಿಗಿಂತ ಭಿನ್ನ. ಶುಭ ಕಾರ್ಯಗಳಿಗೆ ಅರ್ಹವಲ್ಲದ ತಿಂಗಳು ಎಂದು ವಾಡಿಕೆ. ಇದರಲ್ಲಿ ಅಶುಭಗಳು ಹೆಚ್ಚು ಎನ್ನುವರು. ಅದಕ್ಕಾಗಿ ನವ ದಂಪತಿಗಳು ಒಬ್ಬರನ್ನೊಬ್ಬರು ನೋಡುವುದು ಸರಿಯಲ್ಲ ಎಂದು ಹಿರಿಯರ ನಂಬಿಗೆ. ಆದುದರಿಂದ ವಧುವಿನ ಮನೆಯವರು ಬಂದು ವರನ ಮನೆಯವರ ಸಮ್ಮತಿ ಪಡೆದು ವಧುವನ್ನು ಕರೆದುಕೊಂಡುಹೋಗುವರು. ಇತ್ತೀಚಿನ ದಿನಗಳಲ್ಲಿ ಕೆಲ ದಿನಗಳ ಪಟ್ಟಿಗೆ ವಧುವಿನ ಮನೆಯಲ್ಲಿ ಬಿಟ್ಟು ವರನು ಬಂದು ಕರೆದುಕೊಂಡು ಹೋಗುವನು.

**ಸಂಗಮದ ತೀರ್ಥಸ್ನಾನ**

ನವದಂಪತಿಗಳು ಅನುಕೂಲ ರೀತ್ಯಾ ಮೊದಲ ವರ್ಷ ಕೊಡಗಿನ ತೀರ್ಥ ಕ್ಷೇತ್ರವಾದ ಕಾವೇರಿಗೆ ಹೋಗಿ ಅಲ್ಲಿ ಕಾವೇರಿ ಮತ್ತು ಕನ್ನಿಕೆ ಎರಡು ನದಿಗಳು ಸೇರುವ ಸಂಗಮದಲ್ಲಿ ಕೈಕೈ ಹಿಡಿದು ಜೊತೆಯಲ್ಲಿ ನೀರಿನಲ್ಲಿ ಮುಳುಗಿ ಸ್ನಾನ ಮಾಡಿ ನಂತರ ದೇವರ ಪೂಜಾ ಕಾರ್ಯಗಳನ್ನು ಮುಗಿಸಿ ತೀರ್ಥ ಪ್ರಸಾದಗಳನ್ನು ಸ್ವೀಕರಿಸಿ ಮನೆಗೂ ತೆಗೆದುಕೊಂಡು ಹಿಂತಿರುಗುವರು.

[ಮುಗಿಯಿತು]

ಕೃಪೆ :
**ಗೌಡ ಸಂಸ್ಕೃತಿ ಕುಟುಂಬ ಕೈಪಿಡಿ**

---

## ಬದುಕು

ಬದುಕು ಮೂರು ಪದಗಳ
ಸುಂದರ ಜೋಡಣೆ
ಸ್ವಂತಿಕೆಯಿಂದ ಅರಿತರೆ
ಸುಮಧುರ ಭಾವನೆ

ಸುಖ ಬಂದರೆ ನೂರಾರು
ಕಲ್ಪನೆಯ ಅರಮನೆ
ಜಿಗುಪ್ಸೆಗೊಂಡರೆ ನೋವು
ದುಃಖಗಳ ಸೆರೆಮನೆ

ಪ್ರಶಾಂತ ಸಾಗರ ಮೌನ
ಸಂತೋಷ ನೀಡುವಂತೆ
ಬೋರ್ಗರೆದರೆ ಮೌನವನ್ನೇ
ಅಳಿಸುವಂತೆ

ಈ ಕ್ಷಣಿಕ ಬದುಕು ವಿಶ್ವ
ನಾಟಕ ಮುಂದಿರದಿ ಸರಿದು
ಹೋಗುವ ಯಾತ್ರಿಕರ
ಅಗಾಧ ಸಂತೆ

○ **ಕೊಂಪುಳಿ ಬೇಬಿ ಮುತ್ತಪ್ಪ**
ಬೆಂಗಳೂರು

## ವ ರ ದ ಕ್ಷಿ ಣೆ

[ಹಿಂದಿನ ಸಂಚಿಕೆಯಿಂದ]

ಅಪ್ಪ– ಬಡವನು ಪಡೆಯುವ ಮನ ಸುಖವನು ಆ ದೊಡ್ಡವ
ಪಡೆಯುವನೆ ।
ಬಡವನು ಹಣವಲ್ಲಿ ಆದರು ಆ ಗುಣ ನಡತೆಗೆ ಕಮ್ಮಿಹನೆ ॥
ಮಗ– ನಮ್ ಪಕ್ಕದ ಮನೆಯ ಸುಬ್ಬಕ್ಕ ಕೂಡಾ ಹೆಂಗಸು
ಬಲು ಹುಷಾರಿ ಡೌರಿಯ ಕೊಂಡ ಗಂಡನ ಬೈಯುವಳು
ದಿನನಿತ್ಯವು ಹೊಸದಾಟ ।

ಅ- ತಂದೆಯೇ ಮಗಳಿಗೆ ಇಚ್ಛಿಸಿ ಕೊಟ್ಟರೆ
ಉಡುಗೊರೆ ಖಂಡಿತ ತೆಕೊ ಅದನು
ನೀನೆ ಉಡುಗೊರೆ ಭಿಕ್ಷೆಯ ಬೇಡುವ
ಹವ್ಯಾಸ ಖಂಡಿತ ಬಿಡು ಇನ್ನು ॥
ಹೆತ್ತಾ ಹೆಣ್ಣಿಗೆ ಬೆಲೆಯನು ಕಟ್ಟಲು
ಅದು ಮಾರ್ಕೇಟಲ್ಲಿಹ ಸೊಪ್ಪೇನು ।
ಆ ಗೃಹಿಣಿಯು ಸ್ಥಾನವ ಅರಿಯದ ಜನರನು
ನಾ ಬೈದರೆ ಅದರಲಿ ತಪ್ಪೇನು ।

ಮ– ಡ್ಯಾಡಿ ನೀವ್ ಹೇಳ್ದಾಂಗಿನ್ನು ಕೇಳ್ತೀನಿ
ಹೆಣ್ಣಿಗೆ ಮರ್ಯಾದಿ ಕೊಟ್ಟು ಜತೆಗೆ ಬಾಳ್ತೀನಿ ॥
ಪ್ರಾಯ ಬಂದ ಮೇಲೆ ಹತ್ತು ವರ್ಷ ಕಳೆದು ಮದ್ವೆ
ಯಾಕ್ತೀನಿ ।
ಸಾಯೊ ತನಕ ದುಡ್ಡು ಅವಳ ಸಾಕ್ತೀನಿ ।

ಅ– ವರದಕ್ಷಿಣೆ ಕೇಳುವ ಕರಿಮೀಸೆಯ ಜನರೆ
ಅಕ್ಕ ತಂಗಿಯರಿಲ್ಲವೆ ನಿಮ್ಮನೆಯೊಳಗೆ ।
ವರಿಸಲು ವರನೊಬ್ಬ ಬಂದರೆ ಕೇಳಿದ
ಡೌರಿಯ ಕೊಡುವಿರ ನೀವವಗೆ ॥
ವರದಕ್ಷಿಣೆ ಇಲ್ಲದ ಸಂಸಾರದಲ್ಲೂ
ಕಲಹಗಳೆಷ್ಟೊ ನಡೆಯುತಿವೆ ।
ಸಲಹುವ ವಿಧಿಯೇ ಕಾರಣನದಕೆ
ಎಲ್ಲವು ಅವನ ಕೈಯ್ಯಲಿದೆ ॥

ಮ– ಡ್ಯಾಡಿ ! ನೀವ್ ಹೇಳಿದು ನಿಜವಹುದು
ನಿಮ್ಮ ಮಾತಿಗೆ ತುಂಬಾ ಬೆಲೆಯಿಹುದು ।
ವರದಕ್ಷಿಣೆ ಪಡೆಯದೆ ಜನರಿನ್ನು
ಮದುವಾಗುತ ಪಡೆಯಿರಿ ಸುಖವನ್ನು ।

ಅ- ಅಬ್ಬಾ ಮಗನೆ ಒಪ್ಪಿದೆಯಾ । ನನ್ನ
ಮಾತಿಗೆ ಮಣಿಯಿತೆ ನಿನ್ನ ಹೃದಯ ।
ಯಾವ ಕಾರಣ ಹೆಣ್ಣಿಗೆ ಕೊಡುವಿರಿ
ಡೌರಿಯ ನೆವನದಿ ಈ ಶಿಕ್ಷೆ ।
ನಿಮ್ಮನು ನೀವೆ ಚಿಂತಿಸಿ ನೋಡಿರಿ
ಅಲ್ಲವೆ ನೀವ್ ಪಡೆವುದು ಭಿಕ್ಷೆ ।

ಇಬ್ಬರೂ – ವರದಕ್ಷಿಣೆಯೆಂಬಾ ಪ್ಲೇಗ್‌ದು ಹರಡಿದೆ
ಈ ನಾಡಿನ ಉದ್ದಗಲದಲಿ ।
ಈ ಹರಡಿದ ರೋಗವ ಸುಟ್ಟಾಕುವ ನಾವ್
ಒಂದಾಗುತ ಒಗ್ಗಟ್ಟಿನಲಿ ॥

○ **ಹೊದ್ದೂಟಿ ಭವಾನಿಶಂಕರ್**

---

[4 ನೇ ಪುಟದಿಂದ]

'scientific name' ರೂಢಿಯಲ್ಲಿ ಬಂದಿದ್ದು. ಒಂದು ಗಿಡ/ಪ್ರಾಣಿಗೆ ಸ್ಥಳೀಯ(Local common name) ಹೆಸರುಗಳು ಇಪ್ಪತ್ತೆಂಟರಬಹುದು. ಆದರೆ 'scientific name' (ವೈಜ್ಞಾನಿಕ ಹೆಸರು) ಮಾತ್ರ ಒಂದೇ.

ಒಮ್ಮೆ ನಮ್ಮ sir ಒಬ್ಬರು Phone ನಲ್ಲಿ ಮಾತಾಡಿದ ಬಳಿಕ ಜೋರಾಗಿ ನಗುತ್ತಿದ್ದರು. ಯಾಕೆ ಎಂದು ಕೇಳಿದಾಗ ನನ್ನ ಹೆಸರೇ 'ಬಾಲು', ನನಗೆ ಫೋನ್ ಮಾಡಿದವರ ಹೆಸರು 'ಬ್ಯಾಟ್' ಅಂತೆ ಅಂದರು. ಹಾಗಾದರೆ 'ವಿಕೆಟ್' 'ಸ್ಟಂಪ್' ಎಂದು ಹೆಸರಿಡುವ ಕಾಲ ದೂರ ಇಲ್ಲ ಎಂದಾಯಿತು.

ಬಸ್ಸಿನ ಫಲಕದಲ್ಲೆನೊ 'Non–stop' ಅಂತ ಬರೆದಿತ್ತು. ಆದರೆ ಅದು ಬರೇ ನಾಮಕಾವಸ್ಥೆಗಾಗಿ ಮಾತ್ರ. ಏಕೆಂದರೆ ಅದು ಹಾದಿಯುದ್ದಕ್ಕೂ ನಾನಾ ಸ್ಟಾಪುಗಳು.

B.T.S. ನ ಕೆಲ ಬಸ್ಸಿನಲ್ಲಿ ಮಹಿಳೆಯರಿಗಾಗಿ ಅನ್ನುವ ಬದಲು "ಹೆಂಗಸರಿಗೆ ಮಾತ್ರ ಅಂತ ಬರೆದಿದ್ದರು. ಆದರೇ ಯಾರೋ ಕಿಡಿಗೇಡಿಗಳ ಚೇಷ್ಟೆಯಿಂದಾಗಿ ಅನುಸ್ವರ 'ಂ' ಮತ್ತು 'ಗ' ಅಕ್ಷರಗಳನ್ನು ಅಳಿಸಿದ್ದ ಕಾರಣ ಅದು "ಹೆಸರಿಗೆ ಮಾತ್ರ" ವಾಗಿತ್ತು. ನಿಜವಾಗಿಯೂ ಅಕ್ಷರಶಃ ಹೆಸರಿಗೆ ಮಾತ್ರ ಅಷ್ಟೆ.

○ **ಕೋಡಿ ಅನಿತಾ ಮಾಚಯ್ಯ**, ಭಾಗಮಂಡಲ

---

## ಜ್ಞಾನೋಕ್ತಿಗಳು

○ ವ್ಯಾಜ್ಯದ ಮನೆಯಲ್ಲಿ ತುಂಬಿದ ಔತಣಕ್ಕಿಂತಲೂ ಸಮಧಾನದ ಒಣತುತ್ತೇ ಮೇಲು.

○ ಕಪಟವಾಗಿ ಮಾತನಾಡುವ ಮೂಢನಿಗಿಂತಲೂ ನಿರ್ದೋಷವಾಗಿ ಮಾತಾಡುವ ದರಿದ್ರನೇ ಶ್ರೇಷ್ಠ.

○ ಸಂಗ್ರಹ–ಬೈಮನ ಭವಾನಿ, ಚೇರಂಬಾಣೆ

# ಗೌಡಕೇಸರಿ ದಿ॥ ನಿಡ್ಯಮಲೆ ಮುದ್ದಪ್ಪನವರ ಜೀವನ ಚರಿತ್ರೆ

○ ಪ್ರೊ॥. ಕೆ. ಕುಶಾಲಪ್ಪಗೌಡ

ಭಾಗ – ೨

[ಹಿಂದಿನ ಸಂಚಿಕೆಯಿಂದ]

**ಮ**ಡಿಕೇರಿಯಲ್ಲಿ ಕಾಲೇಜು ಹೊಸದಾಗಿ ಆರಂಭಿಸಿ ನಾನು ಆ ವಿದ್ಯಾರ್ಥಿಭವನದಲ್ಲಿದ್ದ ಎರಡು ವರ್ಷಗಳಲ್ಲಿ ಸಂಘದ ಸಭೆಗಳಿಗೆ ನಾಲ್ಕೈರುಸಲಬಂದಿದ್ದ ಮುದ್ದಪ್ಪನವರನ್ನು ಕಂಡಿದ್ದೇನೆ. ಕಾಲೇಜು ವಿದ್ಯಾರ್ಥಿಗಳಾದ ನಮ್ಮನ್ನು ನೋಡಿ ಸಂತೋಷಿಸುತ್ತಿದ್ದರು. ನನಗೆ ಕಾಲೇಜಿನ ಪ್ರಬಂಧ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಬಂದುದನ್ನು ತಿಳಿದು ಅವರು ಮತ್ತು ಅವರ ತಮ್ಮ ಸೋಮಣ್ಣನವರು ಹರ್ಷ ವ್ಯಕ್ತಪಡಿಸಿದ್ದರು. ನಾನು ಅವರ ಊರಿನವನೇ ಎಂಬ ವಾತ್ಸಲ್ಯ ಮುದ್ದಪ್ಪನವರಿಗೆ ತೀವ್ರವಾಗಿತ್ತೆಂದು ನನಗೆ ಅರಿವಾಗುತ್ತಿತ್ತು. ಕಾಲೇಜಿನವರಿಗೆಪ್ರತ್ಯೇಕ ಕೊಠಡಿಯಿತ್ತು. ಒಮ್ಮೆ ಅಲ್ಲಿಗೂ ಬಂದರು. ನಾನು ಇಂಟರ್ ಮೀಡಿಯೆಟ್‌ನಲ್ಲಿ ವಿಜ್ಞಾನದ ವಿದ್ಯಾರ್ಥಿಯಾಗಿದ್ದೆ. ಒಳಗೆ ಬಂದವರೇ, ನನ್ನ ರೆಕಾರ್ಡ್ ಪುಸ್ತಕವನ್ನು ಬಿಡಿಸಿ ನೋಡಿದರು. ಆಗ ನನ್ನ ಅಕ್ಷರ ದುಂಡು ದುಂಡಾಗಿ ನೋಡಲು ಸುಂದರವಾಗಿತ್ತು. ವಿವರಣೆಯ ಚಿತ್ರಗಳನ್ನೂ ಬಿಡಿಸಿದ್ದೆ. ಅವರು ಅದನ್ನೆಲ್ಲ ನೋಡಿ ತುಂಬ ಮೆಚ್ಚಿಕೊಂಡರು. ಚಿಕ್ಕಂದಿನಲ್ಲಿ ನಾನೂ ಹೀಗೆ ಬರೆಯುತ್ತಿದ್ದೆ ಎಂದು ಸಂತೋಷದಿಂದ ನೆನಪು ಮಾಡಿಕೊಂಡು ನುಡಿದರು. ನನಗೆ ತುಂಬ ಹೆಮ್ಮೆಯೆನಿಸಿತ್ತು. ಆ ನೋಟ ಇಂದೂ ನನ್ನ ಮನಸ್ಸಿನ ಕಣ್ಣಿನಲ್ಲಿ ಕಾಣುತ್ತದೆ. ನೆನೆದಷ್ಟು ಸಂತೋಷ ಕೊಡುತ್ತದೆ.

ಒಂದೆರಡು ಸಲ ಅವರ ಮಡಿಕೇರಿಯ ಮನೆಗೂ ನಾನು ಹೋಗಿದ್ದೆ. ಆಗೆಲ್ಲ ತುಂಬ ಸಂತೋಷದಿಂದ ಎಲ್ಲ ವಿಷಯಗಳನ್ನು ಕೇಳುತ್ತಿದ್ದರು. ಭಾರತ ಸರ್ಕಾರದ ವಿದ್ಯಾರ್ಥಿವೇತನಕ್ಕೆ ಅರ್ಜಿ ಹಾಕಲು ನನಗೊಂದು ಸರ್ಟಿಫಿಕೇಟು ಬೇಕಾಗಿತ್ತು. ಅದನ್ನು ಅವರಲ್ಲಿ ನಿವೇದಿಸಿದಾಗ ಮಧ್ಯಾಹ್ನ ಅವರ ಆಫೀಸಿಗೆ ಬರಲು ಹೇಳಿದರು. ಹಾಗೆ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಹೋದಾಗ ಅವರಿಗೆ ತುಂಬ ಸಂತೋಷವಾಯ್ತು. ಅದನ್ನು ಬರೆದು, ಟೈಪು ಮಾಡಿಸಿ, ಸಹಿ ಹಾಕಿ ಕೊಟ್ಟು ಹರಸಿದರು. ಅದೊಂದು ಅಮೂಲ್ಯ ನೆನಪಿನ ಸೊತ್ತಾಗಿ ಈಗಲೂ ನನ್ನ ಬಳಿಯಿದೆ.

ಆಗಿನ ಕೊಡಗಿನಲ್ಲಿ ಒಳ್ಳೆಯ ಆಡಳಿತವಿತ್ತು. ಸಮೃದ್ಧಿಯಿತ್ತು. ಆದರೆ ಗೌಡರು ಅಲ್ಪ ಸಂಖ್ಯಾತರಾಗಿರದಿದ್ದರು, ವಿದ್ಯಾವಂತರ, ಅಧಿಕಾರವಂತರ ಸಂಖ್ಯೆ ಕಡಿಮೆ.

ಈ ಕ್ಷೇತ್ರದಲ್ಲಿ ಕೊಡವರು ಬಹುಸಂಖ್ಯಾತರು. ಅವರದು ಒಂದು ರೀತಿಯ ದಬ್ಬಾಳಿಕೆ, ದರ್ಪ. ನ್ಯಾಯ ಎಲ್ಲರಿಗೂ ಸಮಾನವಾಗಿದ್ದರೂ, ಗೌಡರ ಮೇಲೆ ಒಂದು ರೀತಿಯ ತಿರಸ್ಕಾರ ವ್ಯಕ್ತವಾಗುತ್ತಿತ್ತು. ಹೆಚ್ಚಿನ ಕೊಡವರು ಬ್ರಿಟಿಷರ ಅಂಧಾನುಕರಣೆಯ ವೇಷ, ಭೂಷಣ, ನಡೆ ನುಡಿಗಳನ್ನುಳ್ಳವರಾಗಿದ್ದರು. ಗೌಡರು ಈ ಅಂಧಾನುಕರಣೆಯಿಂದ ದೂರವಿದ್ದರು. ಕೊಡವರು ಪರಸ್ಪರ ಸಂಭಾಷಣೆಯನ್ನು ಎಲ್ಲಿ ಬೇಕೆಂದರಲ್ಲಿ ತಮ್ಮ ಮಾತೃಭಾಷೆಯಲ್ಲಿ ಮಾಡಿದರೆ, ನಮ್ಮವರಿಗೆ (ಅದರಲ್ಲೂ ಸ್ವಲ್ಪ ಕಲಿತವರಿಗೆ) ತಮ್ಮ ಮಾತೃಭಾಷೆಯನ್ನು ಬಳಸಲು ಎಲ್ಲಿಲ್ಲದ ಅಂಜಿಕೆಯಾಗಿ ಹಿಂಜರಿಯುವಿಕೆ ಇತ್ತು ಇಷ್ಟು ಮಾತ್ರವಲ್ಲ ಎಲ್ಲದರಲ್ಲೂ ಕೀಳರಿಮೆಯ ಮನೋಭಾವದಿಂದ ಕೂಡಿದ್ದಂತೆ ಕಾಣುತ್ತಿದ್ದರು. ಬೇರೆಯವರ ತಿರಸ್ಕಾರ ಭಾವ, ತನ್ನವರ ಕೀಳರಿಮೆಯ ಭಾವ – ಇವೆರಡರಿಂದಲೂ ಮುದ್ದಪ್ಪನವರು ವ್ಯಗ್ರರಾಗುತ್ತಿದ್ದರು. ತಮ್ಮ ಸಮಾಜದ ದೊಡ್ಡವರಾಗಲೀ, ಸಣ್ಣವರಾಗಲೀ, ಅವರ ದೃಷ್ಟಿಯಲ್ಲಿ ಏನಾದರೂ ಕುಂದು ಕಂಡು ಬಂದರೆ ಮೊದಲು ಚೆನ್ನಾಗಿ ಬೈದುಬಿಡುತ್ತಿದ್ದರು. ಬೈಸಿಕೊಂಡವರಿಗೂ ಗೊತ್ತು–ಇದು ಒಬ್ಬ ಹಿತಚಿಂತಕನ ಬೈಗುಳ ಎಂದು. ಹಾಗೆ ಯಾರೂ ಮುನಿಸಿಕೊಳ್ಳದೆ, ಅದನ್ನು ಅವಮಾನವೆಂದು ತಿಳಿಯದೆ, ಅವರೊಡನೆ ಸಮಾಧಾನದಿಂದಲೇ ಮಾತಾಡಿ, ಅವರ ಕೋಪವನ್ನು ತಿಳಿಗೊಳಿಸುತ್ತಿದ್ದರು.

ಅವರನ್ನು ಕೊಡವ ಅಧಿಕಾರವರ್ಗದವರಾಗಲೀ, ಇತರ ಕೊಡವ ಧುರೀಣರಾಗಲೀ, ಆತ್ಮೀಯತೆಯಿಂದ ನೋಡಲಿಲ್ಲ. ಅವರೂ ಅದನ್ನು ಲಕ್ಷ್ಯ ಮಾಡಲಿಲ್ಲ. ತಾವೂ ಸಮಾನ ದರ್ಪದಿಂದಲೇ ವರ್ತಿಸಿದರು. ಒಬ್ಬರೇ ಒಬ್ಬ ಕೊಡವರು ಮಾತ್ರ ಅವರಿಗೆ ಅತ್ಯಂತ ಪ್ರಿಯ ಸ್ನೇಹಿತರಾಗಿದ್ದರು. ಅವರೇ ಆಡಳಿತಾಧಿಕಾರಿಯಾಗಿದ್ದ ಐ. ಸಿ. ಸುಬ್ಬಯ್ಯನವರು. ಪರಸ್ಪರರ ಮನೆಗಳಿಗೆ ಸಕುಟುಂಬಿಕರಾಗಿ ಹೋಗಿ ಬರುವುದು ಸಾಮಾನ್ಯವಾಗಿತ್ತು. ಒಮ್ಮೊಮ್ಮೆ ಸುಬ್ಬಯ್ಯನವರನ್ನು ತಮ್ಮ ಹುಟ್ಟೂರಾದ ಪೆರಾಜೆ ಗ್ರಾಮಕ್ಕೂ ಕರೆದುಕೊಂಡು ಬರುತ್ತಿದ್ದರು. ಈ ಸ್ನೇಹಿತರು, ಬಾಲ್ಯಕಾಲದಲ್ಲಿ ನಡೆದುಕೊಂಡಂತೆ ತಾವಿಬ್ಬರೂ ಅತ್ಯುಚ್ಚ ಪದವಿಯಲ್ಲಿರುವಾಗಲೂ ನಡೆಕೊಂಡ ಒಂದು ಅಪೂರ್ವ ಸಂದರ್ಭವನ್ನು ನೋಡುವ ಸೌಭಾಗ್ಯ ನನಗೆ ಮತ್ತು ನನ್ನ ಕೆಲವು ಮಿತ್ರರಿಗೆ ದೊರೆಕಿತು. ಸಾಯಂಕಾಲ ನಾವು ಯಾಕೋ ಪೇಟೆಗೆ ಬಂದಿದ್ದೆವು. ಆಗ ಕಾವೇರಿ ಮಹಲ್ ಸಿನಿಮಾ ಮಂದಿರದಿಂದ ಸಿನೆಮಾ ಹಾಡುಗಳನ್ನು ಜನಾಕರ್ಷಣೆಗೆ ಪ್ರಸಾರ ಮಾಡುತ್ತಿದ್ದರು.

(ಮುಂದಿನ ಸಂಚಿಕೆಯಲ್ಲಿ)

# ವೈಜ್ಞಾನಿಕ ಹಾಗೂ ಧಾರ್ಮಿಕ ದೃಷ್ಟಿಯಲ್ಲಿ ಸ್ತ್ರೀಯರ ಆಭರಣಗಳು

ನಮ್ಮ ಪೂರ್ವಿಕರು ಹಾಗೂ ಸನಾತನ ಧರ್ಮದ ಸ್ಥಾಪಕರೂ ಆದ ಪುರಾಣ ಪುರುಷರು ಸ್ತ್ರೀಯರಿಗಾಗಿ ಹಲವು ಆಭರಣಗಳನ್ನು ರೂಪಿಸಿದ್ದಾರೆ. ಅವುಗಳಲ್ಲಿ ಕೆಲವು ಆಭರಣಗಳಂತೂ ಕಡ್ಡಾಯವಾಗಿ ಧರಿಸಲೇ ಬೇಕಾದಂತವು. ಆದರೆ ಇಂದಿನ ಮಹಿಳೆಯರು ಆಭರಣಗಳೆಂದರೆ ಮೂಗು ಮುರಿಯುತ್ತಾರೆ. ಕಲಿಯುಗದ ಮಹತ್ವ ನೋಡಿ! ಪುರಾಣವೆಂದು ಕೇವಲವಾಗಿ ಮಾತಾಡುವ ಇಂದಿನ ಜನಾಂಗ, ಪುರಾಣದಲ್ಲಿ ಯಾವ ಮಹಾ ತತ್ವ ಅಡಗಿದೆ ಮತ್ತು ಆದರಿಂದಾಗುವ ಪ್ರಯೋಜನಗಳೇನೆಂದು ಅರಿಯುವ ಗೋಜಿಗೆ ಹೋಗುವುದಿಲ್ಲ. ಇಂದಿನ ವರ್ತಮಾನದೇ ನಾಳಿನ ಪುರಾಣವಾಗುತ್ತದೆ ಮತ್ತು ನಾವು ಹಾಕಿಕೊಟ್ಟ ಸಮಾಜದ ರೂಪುರೇಷೆಗಳೇ ನಾಳೆ ನಮ್ಮ ಮಕ್ಕಳ ಭವಿಷ್ಯದ ಬುನಾದಿಯಾಗುತ್ತದೆ ಎಂದು ಏಕೆ ವಿವೇಚಿಸುವುದಿಲ್ಲ? ಶ್ರೀ ವಿಷ್ಣು ಪುರಾಣದಲ್ಲಿ ಬಂದ ಒಂದು ಪ್ರಸ್ತಾವ ನೋಡಿ, "ಕಲಿಯುಗದ ಸ್ತ್ರೀಯರಿಗೆ ಸೌಂಧರ್ಯದ ಬಗ್ಗೆ ನಿಜವಾದ ಅರಿವು ಇರುವುದಿಲ್ಲ. ಕೂದಲನ್ನು ಗಿಡ್ಡವಾಗಿ ಕತ್ತರಿಸಿಕೊಂಡರೆ ತಮ್ಮೆಲ್ಲಾ ಶೃಂಗಾರವು ಮುಗಿದಂತೆ ಅಂದುಕೊಳ್ಳುತ್ತಾರೆ". ಅಂದು ವ್ಯಾಸ ಮಹರ್ಷಿ ಬರೆದ ಪುರಾಣದ ವ್ಯಾಖ್ಯೆಗಳು ಇಂದಿನ ಸ್ತ್ರೀಯರಲ್ಲಿ ಕರಾರುವಾಕ್ಕಾಗಿ ಕಾಣಬಹುದು. ಕೂದಲನ್ನು ಕತ್ತರಿಸಿ ಹರಡಿಬಿಟ್ಟು, ವಿಧವೆಯರಂತೆ ಬೋಳು ಬೋಳಾದ ಹಣೆ, ಕತ್ತು, ಕೈಗಳನ್ನು ಮತ್ತು ಗಂಡುಡುಗೆಯನ್ನು ಧರಿಸುವುದನ್ನು ಧಾರಾಳವಾಗಿ ಕಾಣಬಹುದು. ನಮ್ಮ ಸಮಾಜದಲ್ಲಿ ಸ್ತ್ರೀಯರ ಸ್ಥಾನ ಮಾನವೇನು? ಅವಳ ಕರ್ತವ್ಯವೇನು? ಎಂದು ಅರಿತಾಗ ಮಾತ್ರ "ಮಾತೃದೇವೋ ಭವ" ಎಂಬ ಸಾರ್ಥಕತೆಯನ್ನು ಪಡೆಯುತ್ತದೆ.

ಹಿಂದಿನ ಕಾಲದಲ್ಲಿ ಶ್ರೀ ಶಂಕರಾಚಾರ್ಯರು ತಮ್ಮ ಸೌಂಧರ್ಯ ಲಹರಿಯಲ್ಲಿ ಶಕ್ತಿ ದೇವತೆಯನ್ನು ಮತ್ತು ಅವರ ಸೌಂಧರ್ಯವನ್ನು ಎಷ್ಟು ಚೆನ್ನಾಗಿ ವಿವರಿಸಿದ್ದಾರೆ. ಶಕ್ತಿಯ ವಿನಃ ಹರಿಹರ, ಬ್ರಹ್ಮಾದಿಗಳು ಬರೀ ಜಡ ಬೊಂಬೆಗಳು. ಈ ಶಕ್ತಿ ದೇವತೆಯು ಅವರಿಗೆ ಶಕ್ತಿಯನ್ನು ಕೊಟ್ಟಾಗ ಮಾತ್ರ ಅವರು ತಮ್ಮ ಕಾರ್ಯದಲ್ಲಿ ಜಯಶೀಲರಾಗುತ್ತಾರೆ. ಅಂದರೆ, ಸ್ತ್ರೀಯು ಚೈತನ್ಯಶೀಲಳೆಂದು ಅರ್ಥ. ಈ ಎಲ್ಲಾ ಚೈತನ್ಯದ ಹಿನ್ನೆಲೆಯಲ್ಲಿ ಆಭರಣಗಳ ಪಾತ್ರ ಏನೆಂದು ತಿಳಿಯೋಣ.

ಸಾಮಾನ್ಯವಾಗಿ ಸ್ತ್ರೀಯು ತೊಡುವ ಆಭರಣಗಳೆಂದರೆ ಕಾಲುಂಗುರ, ಕಾಲಂದಿಗೆ ಸೊಂಟಕ್ಕೆ ಡಾಬು, ಕರಿಮಣಿ ಸರ ಮತ್ತು ಮಾಂಗಲ್ಯ, ಕೈಬಳೆ, ತೋಳುಬಂದಿ[ಕಪ್ಪ] ಮೂಗುತಿ, ಕಿವಿಯಲ್ಲಿ ಓಲೆ, ಕಣ್ಣಿಗೆ ಕಾಡಿಗೆ, ಅರಿಶಿಣ ಕುಂಕುಮ, ಜಡೆ, ಬೈತಲೆ, ಬೊಟ್ಟು ಮತ್ತು ಹೂ. ಇವುಗಳನ್ನೆಲಾ ಧರಿಸಿದ ಮುತ್ತೈದೆಯನ್ನು ನೋಡಿದಾಗ ನೋಡುವವರ ಮನಸ್ಸಿಗೆ ಗೌರವದ ಭಾವನೆ ತಾನೇ ತಾನಾಗಿ ಬರುತ್ತದೆ ಮತ್ತು ಅವರಿಗರಿಯದೇ ಮಾತೃ ಭಾವನೆ, ಪೂಜ್ಯ ಭಾವನೆ ಬರುತ್ತದೆ.

**ಕಾಲುಂಗುರ :** ಸಾಮಾನ್ಯವಾಗಿ ಗಂಡಸರು ಪರಸ್ತ್ರೀಯರ ಮುಖವನ್ನು ವೀಕ್ಷಿಸುವುದಿಲ್ಲ. ಅವಳ ಕಾಲನ್ನು ನೋಡಿ ವಿವಾಹಿತಳೋ, ಅವಿವಾಹಿತಳೋ ಎಂದು ತಿಳಿಯುವರು. ರಾಮಾಯಣದಲ್ಲಿ ಶ್ರೀರಾಮ ಲಕ್ಷ್ಮಣರು ಕಿಷ್ಕಿಂಧೆಗೆ ಬಂದಾಗ ಸೀತಾ ಮಾತೆಯ ಆಭರಣಗಳನ್ನು ವಾನರರು ಕೊಡುತ್ತಾರೆ. ಆ ಎಲ್ಲಾ ಆಭರಣಗಳು ಸೀತೆಯದೆಂದು ರಾಮನಿಗೆ ತಿಳಿದಿದ್ದರೂ, ಲಕ್ಷ್ಮಣನನ್ನು ಕೇಳುವಾಗ ಅವನಿಗೆ ಯಾವ ಆಭರಣಗಳ ಪರಿಚಯವಿರುವುದಿಲ್ಲ. ಆದರೆ, ಕಾಲುಂಗುರ ತೋರಿಸಿದಾಗ ಹೌದು ಹೌದು ಎಂದು ಹೇಳುತ್ತಾನೆ.

ಕಾಲುಂಗುರ ಧರಿಸುವ ಬೆರಳಿಗೂ ಗರ್ಭಕೋಶಕ್ಕೂ ನೇರವಾದ ಸಂಬಂಧವಿದೆ. ಗರ್ಭಧಾರಣೆಯಾದ ನಂತರ ಗರ್ಭಸ್ರಾವದ ತೊಂದರೆಯಾಗದಿರಲು ಈ ಕಾಲುಂಗುರ ಸಹಾಯಕಾರಿಯಾಗಿದೆ. ಆ ನರದ ಮೇಲೆ ಪಂಚಲೋಹ ಅಥವಾ ಬೆಳ್ಳಿಯ ಕಾಲುಂಗುರವು ಸದಾ ನಾಡಿಯ ಮಿಡಿತವನ್ನು ಸಮತೋಲನದಲ್ಲಿ ಇರಿಸುತ್ತದೆ.

ಆಧ್ಯಾತ್ಮಿಕವಾಗಿ ಕುಂಡಲಿನಿ ಶಕ್ತಿಯ ಸಚೇತನವಾದ ಸುಷುಮ್ನಾ ನಾಡಿಗೆ ಸಂಬಂಧವಿರುವ ಕಾರಣ ಆ ತಾಯಿಯ ಶರೀರದ ಅಡಿಯಿಂದ ಮುಡಿಯವರೆಗೆ ಚೈತನ್ಯವು ಸಮರ್ಪಕವಾಗಿರುವಂತೆ ಕಾಲುಉಂಗುರ ಮಾಡುತ್ತದೆ.

**ಕಾಲಂದಿಗೆ :**

ಓಡಾಡಿ ಕೆಲಸ ಮಾಡಿ ಆಯಾಸಗೊಂಡಾಗ ಕಾಲಂದಿಗೆ ಕಾಲಿನ ಮಣಿಕಟ್ಟಿನಲ್ಲಿರುವ ನರಗಳ ಮೇಲೆ ಒತ್ತಿದಾಗ ಅದು ಸ್ಪೈನಲ್‌ಕಾರ್ಡ್‌ನ್ನು ಉತ್ತೇಜನಗೊಳಿಸುತ್ತದೆ. ಇದರಿಂದ ಆಯಾಸ ಪರಿಹಾರವಾಗಿ ಮನಸ್ಸಿಗೆ ಒಂದು ರೀತಿಯ ಉಲ್ಲಾಸ ಸಿಗುತ್ತದೆ. ಶರೀರದ ಸಮ ಬೆಳವಣಿಗೆಗೂ ಉಪಯುಕ್ತ. ಮಣಿಕಟ್ಟು ಸುಶಕ್ತವಾಗಿರುವಂತೆ ಕಾಲಂದಿಗೆ ನೋಡಿಕೊಳ್ಳುತ್ತದೆ.

ಕಾಲುಗಂಟಿನ ನರಗಳಿಗೂ ಸೊಂಟದ ಕೆಳಗಿರುವ ನರಗಳಿಗೂ ಸನ್ನಿಹಿತ ಸಂಬಂಧವಿರುವ ಕಾರಣ ಆ ನರಗಳು ಸದಾ ಕಾಲಂದಿಗೆಯ ಸ್ಪರ್ಶದಿಂದ ಚೇತನಗೊಂಡು ನಮ್ಮಲ್ಲಿ ಉಂಟಾಗುವ ಕೀಲುಗಳ [ಜಾಯಿಂಟ್] ನೋವುಗಳನ್ನು ನಿವಾರಿಸುತ್ತದೆ. ಕಾಲಿನ

ಗಿಣ್ಣಿನ ಭಾಗದ ನರಪುಂಡಲದಲ್ಲಿ ನಮ್ಮ ಜೀವಶಕ್ತಿಯ ಚೈತನ್ಯ ತುಂಬಿದ್ದು ಅದು ಸದಾಕಾಲ ಸಂಪರ್ಕವಾಗಿ ಹರಿಯಲು ಈ ಪಂಚಲೋಹ ಅಥವಾ ಬೆಳ್ಳಿಯ ಕಾಲುಂದಿಗೆ ಪೂರಕವಾಗುವುದು.

**ಸೊಂಟಕ್ಕೆ ಡಾಬು :** ಸೌಂದರ್ಯಪ್ರಿಯ ಸ್ತ್ರೀಯು ತನ್ನ ಸೊಂಟವು "ಸಿಂಹಕಟಿ" ಯಂತೆ ಸಣ್ಣದಾಗಿರಬೇಕೆಂದು ಬಯಸುತ್ತಾಳೆ. ಸಹಜವಾಗಿ ಡಾಬಿನ ಉಪಯೋಗದಿಂದ ಅದು ಲಭ್ಯವಾಗುವುದು. ಗರ್ಭಿಣಿಯರಿಗೆ ಹಾಗೂ ವಯಸ್ಸಾದಂತೆಲ್ಲಾ ಸ್ತ್ರೀಯರಿಗೆ ಬೆನ್ನೆಲುಬಿನ ಕೆಳಗಿನ ಬಿಲ್ಲೆಗಳ ಸ್ಥಾನಪಲ್ಲಟವಾಗುವುದು. ಸೊಂಟದ ಭಾಗ ಸಹಜವಾಗಿ ಸಡಿಲವಾಗುವುದು. ಅವುಗಳನ್ನು ಭದ್ರ ಹಾಗೂ ಸಹಜ ಸ್ಥಿತಿಯಲ್ಲಿಡಲು ಡಾಬು ಸಹಕಾರಿಯಾಗಿದೆ. ಹಿಂದಿನಕಾಲದಲ್ಲಿ ಗರ್ಭಿಣಿಯರು ಸುಖ ಪ್ರಸವವಾಗಲೆಂದು ಮೂರು ಇಂಚಿನ ಬಟ್ಟೆಯನ್ನು [ದಟ್ಟಿ] ಕಟ್ಟಿಕೊಳ್ಳುತ್ತಿದ್ದರು. ಆರೋಗ್ಯದ ದೃಷ್ಟಿಯಲ್ಲಿ ಬೆಳ್ಳಿಯ ಡಾಬು ಶರೀರದ ಆ ಭಾಗದಲ್ಲಿ ಉಂಟಾಗುವ ಉಷ್ಣತೆಯನ್ನು ಹೀರಿಕೊಳ್ಳುವುದರಿಂದ ಅಲ್ಲಿಯ ನರಗಳ ಮೇಲಿನ ಪರಿಣಾಮ ಕುಗ್ಗಿರುವ ಹೊಟ್ಟೆಯ ಭಾಗ ಹಿಗ್ಗುತ್ತದೆ. ಇದು ಸಹಜ ಪ್ರಾಣಾಯಾಮಕ್ಕೆ ಸಹಕಾರಿ.

ಆಧ್ಯಾತ್ಮಿಕ ದೃಷ್ಟಿಕೋನದಿಂದ ನೋಡಿದರೆ ಮೂಲಾಧಾರದಲ್ಲಿ ಅಡಗಿರುವ ಕುಂಡಲಿನಿ ಶಕ್ತಿಯು ಊರ್ಧ್ವಮುಖವಾಗಿ ಹರಿಯುವುದರಿಂದ ಇದು ಮುಂದಿನ ಸಂತಾನಕ್ಕೆ ಚೈತನ್ಯ ನೀಡುತ್ತದೆ. ಅಲ್ಲದೆ ನಮ್ಮ ದೇಹದಲ್ಲಿರುವ ಸುಷುಮ್ನಾ ನಾಡಿಯ ನೇರ ನಿಲುವನ್ನು ಚೈತನ್ಯಗೊಳಿಸುವುದು. ಅದಕ್ಕಾಗಿ ಸೊಂಟದ ಭದ್ರತೆ ಅತ್ಯಂತ ಅವಶ್ಯಕ ಇದರ ಆಧಾರವಾಗಿ ಅಲಕಾಂರವಾಗಿ ಧರಿಸುವುದೇ ಡಾಬು. ಈಗಲೂ ಹಳ್ಳಿಯ ಕಷ್ಟಜೀವಿಗಳು ಸೊಂಟಕ್ಕೆ ಬಟ್ಟೆ [ದಟ್ಟಿ] ಕಟ್ಟಿಕೊಳ್ಳುವುದನ್ನು ಕಾಣಬಹುದು. ಅಲ್ಲದೆ ಭರತನಟ್ಯಂ ಮುಂತಾದ ನೃತ್ಯ ಕಲೆಗಳ ಅಭ್ಯಾಸದ ಸಮಯದಲ್ಲೂ ಇದೇ ರೀತಿಯಲ್ಲಿ ಬಟ್ಟೆ ಕಟ್ಟಿಕೊಳ್ಳುವುದರ ಹಿನ್ನೆಲೆ ಇದೇ ಆಗಿದೆ ಸ್ತ್ರೀಯರಿಗೆ ವಯಸ್ಸಾದಾಗ ಸೊಂಟದ ಭಾಗ ಜಾರುವುದನ್ನು [ಅವಯವಗಳು ಸಡಿಲವಾಗಿ] ತಪ್ಪಿಸಲು ಮತ್ತು ಅವುಗಳ ಭದ್ರತೆಯ ದೃಷ್ಟಿಯಿಂದ ಡಾಬು ಅತೀ ಅವಶ್ಯಕವಾಗಿದೆ.

**ಕರಿಮಣಿಸರ ಮತ್ತು ಮಾಂಗಲ್ಯ**

ಕರಿಮಣಿಯನ್ನು ಹಿಂದಿನ ಕಾಲದಲ್ಲಿ ಜೇಡಿಮಣ್ಣಿನಿಂದ ಮಾಡುತ್ತಿದ್ದರು. ಆದರೆ ಈಗ ಕಲ್ಲಿನಿಂದ ಮಾಡುತ್ತಾರೆ. ಈ ಮಣಿ ಎದೆಯ ಭಾಗದಲ್ಲಿ ಉಂಟಾಗುವ ಉಷ್ಣತೆಯನ್ನು ಹೀರಿಕೊಂಡು ಹಾಲು ಕೆಡದಂತೆ ಕಾಪಾಡುತ್ತದೆ. ಇಂದಿಗೂ ಮನೆಯ ಹಿರಿಯರು ಮಾಂಗಲ್ಯದ ಜೊತೆಯಲ್ಲಿ ಒಂದೆರಡು ಕರಿಮಣಿಯನ್ನಾದರೂ ಹಾಕಿಕೊಳ್ಳಲು ಹೇಳುತ್ತಾರೆ.

ಅಧ್ಯಾತ್ಮಿಕ ಹಿನ್ನೆಲೆಯಲ್ಲಿ ಮಾಂಗಲ್ಯ ಕತ್ತಿನ ಸುತ್ತ ಸುಷುಮ್ನಾ ನಾಡಿಗೆ ಸಮ್ಮಿಲನ ಚಕ್ರಗಳ ಆಧಾರವಾದ ಬೆನ್ನೆಲುಬಿನ ಮೇಲ್ಭಾಗ [ಕತ್ತಿನ ಹಿಂಭಾಗದಿಂದ] ವಿಶುದ್ಧಚಕ್ರಕ್ಕೆ ಹರಿದುಬಂದು ಹೃದಯದ ಭಾಗದಲ್ಲಿರುವ ಅನಾಹತ ಚಕ್ರದಲ್ಲಿ ಸಮ್ಮಿಲನಗೊಳ್ಳುತ್ತವೆ. ಈ ಸಂಕೇತ ಹೃದಯದ ಜ್ಯೋತಿಯು ಸದಾ ದರ್ಶನೀಯವೆಂದು ಸೂಚಿಸುವುದು ಮಾಂಗಲ್ಯ.

**ಕೈಯುಂಗುರ**

ಉಂಗುರವನ್ನು ತೊಡುವ ಬೆರಳಿಗೂ, ಬ್ರಹ್ಮರಂಧ್ರಕ್ಕೂ ಸಂಪರ್ಕವಿದೆ. ಬಂಗಾರದ, ಬೆಳ್ಳಿಯ ಅಥವಾ ಪಂಚಲೋಹದ ಉಂಗುರ ಉಷ್ಣತೆಯನ್ನು ಸಮನಾಗಿರಿಸಿ ಮನಸ್ಸು ಚಂಚಲವಾಗದಿರಲು ಮತ್ತು ನಮ್ಮ ಆತ್ಮಶಕ್ತಿಯನ್ನು ಜಾಗೃತಿಗೊಳಿಸಲು ಸಹಾಯಕಾರಿಯಾಗಿರುವುದು.

ಯಜ್ಞ ಯಾಗಾದಿಗಳಲ್ಲಿ ಸಂಕಲ್ಪ ಮಾಡುವಾಗ ಈ ಬೆರಳಿಗೆ (ದರ್ಬೆ) ಪವಿತ್ರ ಉಂಗುರವನ್ನು ಧರಿಸುವುದು ನೀವು ನೋಡಿರಬಹುದು. ಇದರ ಕಾರಣ, ಸಂಕಲ್ಪ ಮಾಡುವಾಗ ಮನಸ್ಸು ವಿಚಲಿತವಾಗದೆ ಧೃಡವಾಗಿರಲೆಂಬುದೇ ಆಗಿದೆ. ಈ ಬೆರಳಿನ ನರಕ್ಕೂ ನಮ್ಮ ಮೆದುಳಿನ ನರಕ್ಕೂ ನೇರ ಸಂಬಂಧವಿದೆ. ನಮ್ಮ ಚಿತ್ತಚಾಂಚಲ್ಯಕ್ಕೆ ಒಳಗಾಗದಂತೆ ಮತ್ತು ಬುದ್ಧಿ ಭ್ರಮಣೆಯಾಗದಂತೆ ಸಂಪರ್ಕವಾಗಿರಿಸುತ್ತದೆ. ಸನ್ಮಾರ್ಗದಲ್ಲಿ ಪ್ರವರ್ತಿಸಲು ಈ ಬೆರಳಿನ ಮೇಲೆ ಮೃದು ಒತ್ತಡ ಅತಿ ಅವಶ್ಯಕ.

**ಕೈಬಳೆ**

ನಾಡಿ ಮಿಡಿತವನ್ನು ಪರೀಕ್ಷಿಸಲು ವೈದ್ಯರು ಮಣಿಕಟ್ಟನ್ನು ನೋಡುತ್ತಾರೆ. ಸ್ತ್ರೀ ಉದ್ರೇಕಗೊಂಡಾಗ ನಾಡಿ ಮಿಡಿತ ಹತೋಟಿ ಮೀರಬಾರದು. ಗಾಜಿನ ಬಳೆ ಆ ನರಗಳ ಮೇಲೆ ಆಡುವುದರಿಂದ ಅಂತಹ ಸಮಯದಲ್ಲಿ ನರಗಳು ಶಾಂತಗೊಂಡು ಸಹಜ ಸ್ಥಿತಿಗೆ ಬರುತ್ತವೆ. ಈ ಕಾರಣ ಗೃಹಿಣಿಯು ಕೆಲಸ ಮಾಡುವಾಗ ಕೈ ಬಳೆಗಳನ್ನು ಮುಂದಕ್ಕೆ ತಳ್ಳಿ ವಿಶ್ರಾಂತಿ ಪಡೆಯುವುದು ಗಮನಿಸುವಂತ ಅಂಶ. ನಮ್ಮ ಪ್ರಾಚೀನ ಪರಂಪರೆಯಲ್ಲಿ ವೀರ, ಧೀರರು ಅಚಲ ನಿರ್ಧಾರ ಕೈಗೊಳ್ಳುವಾಗ ಸಂಕೇತವಾಗಿ ಕಂಕಣವನ್ನು ತೊಡುತ್ತಾರೆ.

**ತೋಳುಗಳಿಗೆ ಕಪ್ಪ** (ತೋಳು ಬಂದಿ) **:** ತೋಳು ಹೃದಯದ ನಾಡಿಯ ಮಿಡಿತಕ್ಕೆ ಅತ್ಯಂತ ಸನಿಹವಾಗಿದೆ. [ರಕ್ತದ ಒತ್ತಡ ಪರೀಕ್ಷಿಸುವುದು ಈ ಭಾಗದಲ್ಲೇ]ಆದ್ದರಿಂದ ಸದಾ ತಾಯಿಯ ಹೃದಯದ ಬಡಿತವನ್ನು ಸ್ಥಿಮಿತದಲ್ಲಿಡಲು ಕಪ್ಪವನ್ನು ಧರಿಸುವುದು. ಬೆಳ್ಳಿ, ಬಂಗಾರ, ಪಂಚಲೋಹ ಅಥವಾ ತಾಮ್ರದಿಂದ ಮಾಡಿದ ಕಪ್ಪವನ್ನು ಉಪಯೋಗಿಸುತ್ತಿದ್ದರು. ಮುತ್ತೈದೆಯಾದ ಮಾತೆಗೆ ದೈವೀಶಕ್ತಿಯನ್ನು ನೀಡುವುದೇ ಕಪ್ಪ ಅಥವಾ ತೋಳುಬಂದಿ.

ಖಾಯಿಲೆಯಾದಾಗ ಮತ್ತು ಹೆದರಿದಾಗ ಯಂತ್ರಗಳನ್ನು ಕಟ್ಟುವುದು ತೋಳಿನ ಈ ಭಾಗಕ್ಕೆ. ಲೋಹದ ಯಂತ್ರಗಳು ಅತಿಯಾದ ಉಷ್ಣವನ್ನು ಹೀರಿ ನರಮಂಡಲಗಳು ಅತೀ ಉದ್ರೇಕಕ್ಕೆ ಎಡೆಗೊಡದಂತೆ ಮಾಡುತ್ತವೆ. ಬಾಲಗ್ರಹ (ಪಿಟ್ಸ್) ಬಂದಾಗ ಕಬ್ಬಿಣದ ಬೀಗದ ಕೈಯನ್ನು ಹಿಡಿಸುವುದನ್ನು ಗಮನಿಸಿ.

**ಮೂಗುತಿ**

ಮುತ್ತೈದೆ ಎಂದೊಡನೆ ನೆನಪಿಗೆ ಬರುವುದೇ ಮುತ್ತಿನ ಮೂಗುತಿ. ನಮ್ಮ ಭಾರತ ದೇಶದಲ್ಲಿ ಮೂಗುತಿಯದೇ ಒಂದು ಭವ್ಯ ಪರಂಪರೆ ಇದೆ. ಗೃಹಿಣಿಯಾದವಳಿಗೆ ದಿನ ನಿತ್ಯ ಸಂಸಾರಿಕ ಆಗು–ಹೋಗುಗಳಲ್ಲಿ ಅನೇಕ ಬಗೆಯಲ್ಲಿ ಉದ್ರೇಕಗೊಳ್ಳುವ ಸಂಭವವುಂಟು. ಇದರಿಂದ ಶರೀರದ ಉಷ್ಣತೆ ಅತಿಯಾಗುತ್ತದೆ. ಗಾಳಿಯಲ್ಲಿರುವ ಉಷ್ಣತೆಯನ್ನು ಮೂಗುತಿ ಸೋಸುವುದರಿಂದ ಉಷ್ಣತೆ ಸಮತೋಲನದಲ್ಲಿರಲು ಸಹಾಯಕಾರಿ.

ಮೂಗಿಗೆ ಧರಿಸುವ ಮೂರು ಬಗೆಯ [ನಮೂನೆ] ಆಭರಣಗಳು ಬಲಗಡೆ ಪಿಂಗಳ (ಸೂರ್ಯನಾಡಿ) ಎಡಗಡೆ ಇಡಾ (ಚಂದ್ರನಾಡಿ) ಮತ್ತು ಬುಲಾಕು ಸುಷುಮ್ನಾಗಳ ಸಂಗಮವೇ ಆಧ್ಯಾತ್ಮಿಕ ಶಕ್ತಿಯ ವಿಕಾಸ. ಈ ಕಾರಣದಿಂದಲೇ ಶುಭಕಾರ್ಯಕ್ಕೆ ಹೊರಟಾಗ ಮುತ್ತೈದೆಯ ದರ್ಶನ ಮಾಡುತ್ತಿದ್ದದ್ದು ಭಗವತ್ ಶಕ್ತಿಯ ಸಂಕೇತ ಎಂದು. ಇಂದಿಗೂ ತಿಳಿದವರುಬಳ್ಳಿ ಕಾರ್ಯಕ್ಕೆ ಹೊರಟಾಗ ಮುತ್ತೈದೆಯಾದ ತನ್ನ ಪತ್ನಿಯ ಮುಖವನ್ನು ವೀಕ್ಷಿಸಿ ಹೊರಡುತ್ತಾರೆ. ಇಲ್ಲವಾದಲ್ಲಿ ಕನ್ಯಾ ಮುತ್ತೈದೆ ಎಂದು ಹೆಣ್ಣು ಮಕ್ಕಳ ಮುಖವನ್ನಾದರೂ ವೀಕ್ಷಿಸುತ್ತಾರೆ. ಆದ್ದರಿಂದ ನಮ್ಮ ಹೆಣ್ಣು ಮಕ್ಕಳಿಗೆ ಇಂತಹ ವಿಷಯಗಳನ್ನು ತಿಳಿಸಿ ಹೇಳುವುದು ಬಹಳ ಅಗತ್ಯವಾಗಿದೆ.

**ಕಿವಿಯೋಲೆ**

ತಾಯಿಯಾದವರಿಗೆ ಸದಾ ಒಂದಿಲ್ಲೊಂದು ಬಿಕ್ಕಟ್ಟು (ಟೆನ್‌ಸನ್) ಇದ್ದೇ ಇರುತ್ತದೆ. ಇದು ಕಿವಿಯಲ್ಲಿ ಸದಾ ಬಿಕ್ಕಟ್ಟನ್ನುಂಟು ಮಾಡುತ್ತದೆ. ಓಲೆ ಈ ಬಿಕ್ಕಟ್ಟನ್ನು ಉಷ್ಣತೆಯನ್ನು ಹೀರಿಕೊಳ್ಳುವ ಮುಖಾಂತರ ಹೋಗಲಾಡಿಸುತ್ತದೆ(ಸ್ಥಿಮಿತಕ್ಕೆ ತರುತ್ತದೆ). ಹಿಂದಿನ ಕಾಲದಲ್ಲಿ ಹೊಂಗೆ ಬೀಜ, ಸೋರೆ ಬೆಂಡು ಮತ್ತು ತಾಳೆ ಗರಿಗಳನ್ನು ಉಪಯೋಗಿಸುತ್ತಿದ್ದರು.

ಆಧ್ಯಾತ್ಮಿಕವಾಗಿ ನೋಡಿದರೆ ಶಬ್ದದಿಂದ ಉಂಟಾಗುವ ಗರಿಷ್ಠ ಮತ್ತು ಕನಿಷ್ಠ ಶಬ್ದದ ಕಂಪನದಿಂದ ಕಿವಿಯ ತಮಟೆ ಮೇಲೆ ಉಂಟಾಗುವ ವಿಕಾಸ ಸಂಕೋಚದಿಂದ ಯಾವುದೇ ತೊಂದರೆಯಾಗದಿರಲು ಕಿವಿಯ ಆಭರಣ ಸಹಾಯಕ್ಕಾರಿ.

**ಕಣ್ಣಿಗೆ ಕಾಡಿಗೆ**

ಕಾಡಿಗೆ ಕಣ್ಣಿನ ನರಗಳನ್ನು ತಂಪು ಮಾಡುತ್ತದೆ. [ಅಂಗಡಿಯಲ್ಲಿ ಮಾರುವ ಕಾಡಿಗೆ ಅಲ್ಲ] ನಂದಿ ಬಟ್ಟಲ ಹೂವಿನಿಂದ ಶುಚಿಯಾಗಿ ಕ್ರಮವಾಗಿ ತಯಾರಿಸಿದ ಕಾಡಿಗೆ. ಇದರ ಉಪಯೋಗದಿಂದ ಕಣ್ಣಿನ ಸೌಂಧರ್ಯ ಹೆಚ್ಚುವುದಲ್ಲದೆ ಕಣ್ಣಿನಲ್ಲಿರುವ ಕಸ, ಧೂಳನ್ನು ಹೀರಿಕೊಂಡು ಕಣ್ಣನ್ನು ಶುದ್ಧವಾಗಿರಿಸುತ್ತದೆ. ಗರ್ಭಿಣಿ ಸ್ತ್ರೀಯು ತನ್ನ ಗರ್ಭದಲ್ಲಿರುವ ಶಿಶುವಿಗೆಕಣ್ಣಕಪ್ಪನ್ನು ಧಾರೆ ಎರೆಯುತ್ತಾಳೆ. ಆದ್ದರಿಂದ ಕಣ್ಣಿನ ಕಾಡಿಗೆ ಅವಳಲ್ಲಿ ಚೈತನ್ಯ ತುಂಬಲು ಸಹಾಯಕಾರಿ.

**ಕುಂಕುಮ :** ಪೂರ್ಣ ಚಂದ್ರನಂತೆ ಹೊಳೆಯುವ ಕುಂಕುಮವು ಸ್ತ್ರೀ ಸೌಭಾಗ್ಯದ ಮೊದಲ ಚಿನ್ಹೆ. ಉತ್ತರ ಭಾರತೀಯರಲ್ಲಿ ಸಿಂಧೂರಕ್ಕೆ ಬಹಳ ಪ್ರಾಮುಖ್ಯತೆ ಇದೆ. [ನೆತ್ತಿಯ ಮೇಲೆ ಧರಿಸುವುದು] ದಕ್ಷಿಣ ಭಾರತೀಯರಲ್ಲಿ ಇದು ಕಾಡು ಬರುವುದಿಲ್ಲ. ಆದರೆ ಪುರಾಣಗಳಲ್ಲಿ ಸಿಂಧೂರದ ಉಲ್ಲೇಖ ಕಂಡುಬರುತ್ತದೆ. ಸಹಜ ಉದ್ರೇಕದಿಂದ ಹಣೆಯ ಭಾಗ ಮುದುಡುತ್ತದೆ.ಆ ಸಮಯದಲ್ಲಿ ಅಲ್ಲಿರುವ ನರಮಂಡಲಗಳು ಮತ್ತು ಚರ್ಮ ತತ್ತರಿಸುವುದು. ಕುಂಕುಮದಲ್ಲಿರುವ ಅನೇಕ ಔಷಧಿ ಅಂಶಗಳು ಉದ್ರೇಕಗೊಂಡ ಚರ್ಮದ ಮೇಲೆ ಉಂಟಾಗುವ ದುಷ್ಪರಿಣಾಮವನ್ನು ತಡೆಗಟ್ಟುತ್ತದೆ.

ಕುಂಕುಮವನ್ನು ತಯಾರಿಸುವಾಗ ಅರಿಶಿಣ, ನಿಂಬೆಹಣ್ಣಿನ ರಸ ಮತ್ತು ಸುಣ್ಣವನ್ನು ಉಪಯೋಗಿಸುತ್ತಾರೆ. ಅರಿಶಿಣ ಚರ್ಮದ ರೋಗಗಳನ್ನು ತಡೆಗಟ್ಟಿದರೆ, ನಿಂಬೆರಸ ಚರ್ಮಕ್ಕೆ ಕಾಂತಿಯನ್ನೂ, ಮೃದುತ್ವವನ್ನು ಮತ್ತು ನರಗಳಿಗೆ ತಂಪನ್ನು ಉಂಟುಮಾಡುತ್ತದೆ.ಸುಣ್ಣ[ಕ್ಯಾಲ್ಸಿಯಂ] ಎಲುಬಿಗೆ ಉಪಯುಕ್ತ.

ಆಧ್ಯಾತ್ಮಿಕವಾಗಿ ಈ ಭಾಗವು ಆಜ್ಞಾ ಚಕ್ರದ ಸ್ಥಾನ,ಜ್ಞಾನದ ಸಂಕೇತ.ಈಶ್ವರನ ಮತ್ತು ದೇವಿಯ ಮೂರನೇ ಕಣ್ಣು ಇರುವುದು ಇಲ್ಲಿಯೇ. ಭ್ರೂಮಧ್ಯ ಭಾಗದಲ್ಲಿ ಚೈತನ್ಯವು ಕೇಂದ್ರಿಕೃತವಾದಾಗ ದಿವ್ಯ ಜ್ಞಾನದ ದರ್ಶನವಾಗುವುದು. ಶ್ರೀವಿಧ್ಯಾ ಉಪಾಸಕರು ದೇವಿಯ ಪಾದ ಈ ಭಾಗದಲ್ಲಿ ಇರುವುದೆಂದು ಹೇಳುತ್ತಾರೆ. ಆದ್ದರಿಂದ ಭ್ರೂಮಧ್ಯಪ್ರದೇಶದಲ್ಲಿ ಕುಂಕುಮವಿಟ್ಟು ದೇವಿಯ ಪಾದ ಪೂಜೆ ಮಾಡುವ ಸಂಕೇತ

ಗೃಹಿಣಿಯರ ಹಣೆಯ ಕುಂಕುಮವು ದಣಿದು ಬಂದ ಪತಿಯ ಆಯಾಸವನ್ನು ಪರಿಹರಿಸುವುದು. ಅಲ್ಲದೆ ಪರಪುರುಷನ ಕಾಮದೃಷ್ಟಿಯನ್ನು ಪರಶಿವನ ಮೂರನೆಯ ಕಣ್ಣು ಮನ್ಮಥನನ್ನು ದಹಿಸಿದಂತೆ ದಹಿಸಿಬಿಡುವುದು. ಆದ್ದರಿಂದ ಕುಂಕುಮವು ಸ್ತ್ರೀಯರ ಪತಿವ್ರತೆಯನ್ನು ಕಾಪಾಡುವ ಶ್ರೀ ರಕ್ಷೆಯಾಗಿದೆ.

**ಅರಿಶಿಣ :** ಅರಿಶಿಣವನ್ನು ಮುಖ, ಕೈ ಕಾಲುಗಳಿಗೆ ಹಚ್ಚುವುದರಿಂದ ಹೆಣ್ಣಿನ

ರೂಪಕ್ಕೆ ದಕ್ಕೆ ತರುವ ಬೇಡದ ಕೂಡಲಿನ ಬೆಳವಣಿಗೆಯನ್ನು ಕುಂಟಿತಗೊಳಿಸಿ ನಿವಾರಿಸುವುದು. ಹೆಣ್ಣಿನ ಮೈಮೇಲಿನ ಕೂದಲು ಅವಳ ಸೌಂಧರ್ಯಕ್ಕೆ ದಕ್ಕೆ ತರುವುದಲ್ಲದೆ, ಅದು ಅಮಂಗಳದ ಸೂಚನೆ. ಅರಿಶಿಣದ ಲೇಪನದಿಂದ ಮುಖದ ಮೇಲಿನ ಮೊಡವೆ ಅಲ್ಲದೆ ಅನೇಕ ಚರ್ಮವ್ಯಾದಿಗಳನ್ನು ನಿವಾರಿಸುವುದು. ಇದು ಚರ್ಮಕ್ಕೆ ಕಾಂತಿಯನ್ನೂ ಕೊಡುತ್ತದೆ. ಇದು ನಂಜುಹರ. ಆದ್ದರಿಂದ ಇದನ್ನು ಹೆಚ್ಚಾಗಿ ಆಯುರ್ವೇದದಲ್ಲಿ ಬಳಸುತ್ತಾರೆ.

**ಜಡೆ ಬೈತಲೆ :** ಬೈತಲೆಯನ್ನು ಮಧ್ಯ ಭಾಗದಲ್ಲಿ ತೆಗೆಯುವುದರಿಂದ ಬಿಸಿಲಿನಲ್ಲಿ ಓಡಾಡುವಾಗ ಉಷ್ಣತೆಯನ್ನು ತಲೆಯ ಎರಡೂ ಕಡೆಯಲ್ಲಿ ಸಮನಾಗಿ ಇರಿಸುತ್ತದೆ. ಕೂದಲಿನ ಚೇತನಕ್ಕೂ ಉತ್ತಮ ಬೆಳವಣಿಗೆಗೂ ಇದು ಅನುಕೂಲವಾಗುತ್ತದೆ. ಉದ್ದನೆಯ ಜಡೆಯು ಬೆನ್ನುಮೂಳೆ ಮತ್ತು ಸ್ಪೈನಲ್‌ಕಾರ್ಡ್‌ನ್ನು ರಕ್ಷಿಸುತ್ತದೆ.

ಉದ್ದನೆಯ ಜಡೆ ಆಧ್ಯಾತ್ಮಿಕ ವಿಕಾಸದ ಪ್ರತೀಕ. ಉದಾ : ಅಕ್ಕಮಹಾದೇವಿಯ ಜಡೆ. ಮೂರು ಎಳೆಗಳ ಭಾಗಗಳು ಇಡಾ, ಪಿಂಗಳ ಮತ್ತು ಸುಷುಮ್ನಾಗಳನ್ನು ಪ್ರತಿನಿಧಿಸುತ್ತದೆ. ಇವುಗಳ ಸಮ್ಮಿಲನವಾದಾಗಲೇ ಜ್ಞಾನದ ಬಾಗಿಲು ತೆರೆಯುವುದು.

**ಹೂವು :** ಆಯಾ ಋತುಮಾನದಲ್ಲಿ ದೊರೆಯುವ ಸುವಾಸನಾಯುಕ್ತವಾದ ಪುಷ್ಪಗಳನ್ನು ಮುಡಿಯುವುದರಿಂದ ಮನಸ್ಸು ಪ್ರಫುಲ್ಲವಾಗಿರುತ್ತದೆ. ಕೂದಲು ಬೇಗ ಬೆಳ್ಳಗಾಗುವುದಿಲ್ಲ ಮತ್ತು ಉದುರುವುದಿಲ್ಲ. ಇದರಿಂದ ತಲೆಯಲ್ಲಿ ಹೊಟ್ಟು ಏಳುವುದಿಲ್ಲ ಮತ್ತು ಕೂದಲಿಗೆ ರಕ್ಷಣೆ ನೀಡುತ್ತದೆ.

ಆಧ್ಯಾತ್ಮಿಕವಾಗಿ ಹೂವನ್ನು ಮುಡಿಯುವುದು ಬ್ರಹ್ಮರಂಧ್ರವಿರುವ ಸಹಸ್ರಾರ ಚಕ್ರವಿರುವಲ್ಲಿ. ಇಲ್ಲಿಯೇ ಕುಂಡಲಿನಿ ಸ್ವರೂಪಿಣಿಯಾದ ಶಕ್ತಿಮಾತೆಯು ಸದಾಶಿವನೊಂದಿಗೆ ವಿಹರಿಸುತ್ತಾಳೆ. ಆದ್ದರಿಂದ ಹೂ ಮುಡಿಯುವ ಸಂಕೇತ ಸದಾ ಬ್ರಹ್ಮರಂಧ್ರವನ್ನು [ಸಹಸ್ರಾರ ಚಕ್ರವನ್ನು] ಪೂಜೆ ಮಾಡುವುದೇ ಆಗಿದೆ.

**ಬೈತಲೆ ಬಟ್ಟು :** ಶಾರೀರಿಕವಾಗಿ ನಮ್ಮ ತಲೆಯಲ್ಲುಂಟಾಗುವ ಉಷ್ಣದ ಏರಿಳಿತಗಳನ್ನು ಸಮವಾಗಿಸಲು ಈ ಬಂಗಾರದ ಬೈತಲೆ ಬಟ್ಟು ಅತ್ಯಂತ ಉಪಯುಕ್ತವಾಗಿದೆ.

ತಲೆಯ ಮೇಲಿನಿಂದ ಹಿಂದಿನ ಮುಡಿಯವರೆಗೂ ಇದು ಒಂದು ಸಮ್ಮಿಲನದ ಸಂಕೇತ. ಹಣೆಯ ಮಧ್ಯದಲ್ಲಿರುವ ಆಜ್ಞಾ ಚಕ್ರದಲ್ಲಿಗೆ ಹರಿದ ಕುಂಡಲಿನಿ ಶಕ್ತಿಯು ಅದರ ಅಂತಿಮ ಗುರಿಯಾದ ಸಹಸ್ರಾರದ ನಡುವೆ ಇರುವ ಬ್ರಹ್ಮರಂಧ್ರಕ್ಕೆ ಸೇರಿರುವ ಸಂಕೇತವಾಗಿದೆ.

ಈ ಮೊದಲು ಉಲ್ಲೇಖಿಸಿದಂತೆ ಸ್ತ್ರೀ ಎಂದರೆ ಮಾತೆ, ಶಕ್ತಿ, ಜ್ಞಾನ ಮತ್ತು ಮುಕ್ತಿಯ ಸಂಕೇತ. ಸೃಷ್ಟಿಯ ಸಂಚಾಲಕಿ ಸಮಾಜದ ಸುಧಾರಕಿ ಪ್ರಕೃತಿಯ ಪ್ರತಿರೂಪ. ಅವಳ ಕ್ಷೇಮ ರಕ್ಷಣೆಯಿಂದ ಮಿಕ್ಕೆಲ್ಲವೂ ಸುರಕ್ಷಿತವಾಗಿರಬಲ್ಲವು. ಆದ್ದರಿಂದಲೇ ನಮ್ಮ ಪೂರ್ವಿಕರು ಅತ್ಯಂತ ಸೂಕ್ತ ಅವಲೋಕನ ಮಾಡಿ ಈ ಎಲ್ಲ ವಿಧದ ರಕ್ಷಣಾಕ್ರಮದಂತೆ ಆಭರಣಗಳನ್ನು ಧರಿಸುವ ಸಂಪ್ರದಾಯ ಮಾಡಿಕೊಟ್ಟಿದ್ದಾರೆ. ಇದೆಲ್ಲ ಬರೀ ಅಲಂಕಾರ ಸಾಧನಗಳಲ್ಲ. ಲೌಕಿಕ, ಆಧ್ಯಾತ್ಮಿಕ ರಕ್ಷಣೆಯ ಚಿನ್ಹೆಗಳು.

ಇಂದಿನ ಕಾಲದಲ್ಲಿ ಇದೆಲ್ಲಾ ಆರ್ಥಿಕವಾಗಿ ತುಂಬಾ ತೊಂದರೆಯಾಗಿ ಕಾಣಬಹುದು. ಆದರೆ ನಮ್ಮ ಜೀವನದ ಗುರಿಯು ಸರ್ವಾಂಗೀಣ ಉನ್ನತಿಗೆ ಅತಿ ಅವಶ್ಯಕವೆಂದು ತೋರುತ್ತದೆ. ಈ ದಿಶೆಯಲ್ಲಿ ಇನ್ನಷ್ಟು ವಿಶಾಲವಾಗಿ ವಿಚಾರಿಸಿದರೆ, ಕೇವಲ ಇದೆಲ್ಲ ತಪ್ಪು ಕಲ್ಪನೆಗಳೆಂದು ಕಡೆಗಣಿಸದೆ, ಸೂಕ್ತ ಕಾರಣಗಳನ್ನು ಕಂಡುಕೊಳ್ಳಲು ಪ್ರಯತ್ನಿಸುವುದು. ಹೆಚ್ಚು ಸೂಕ್ತವಲ್ಲವೇ.

● **ಬಿಟ್ಟೀರ ಚೋಂದಮ್ಮ ಶಂಭು,**
ಬೆಂಗಳೂರು

## ಆ ಕಾಲ ಚೆಂದವೊ ಈ ಕಾಲ ಚೆಂದವೊ

ಆ ಕಾಲ ಚೆಂದವೊ ! ಈ ಕಾಲ ಚೆಂದವೊ ! ಯೋಚನೆಯ ಮಾಡಿ ಹೇಳೋ ಜಾಣ ! ಆಹಾ ! ಯೋಚನೆಯ ಮಾಡಿ ಹೇಳೋ ಜಾಣ.

ಮುಂಜಾನೆ ಎದ್ದು ಮಹಾದೇವ ಎಂದು ಬೆವರ ಸುರಿಸಿದುಡಿಯುವ ಆ ಕಾಲ ! ಮಲಗಿಕೊಂಡು ಆರಾಮವಾಗಿ ಇರುವ ಈ ಕಾಲ. ಆಹಾ! ಆ ಕಾಲ ಚೆಂದವೊ ಈ ಕಾಲ ಚೆಂದವೊ ?

ತಾಯಿ ತಂದೆ ಗುರುಗಳು ಪ್ರತ್ಯೇಕ್ಷ ದೇವರು ಎಂದು ಪೂಜಿಗೈಯುತ್ತಿದ್ದ ಆ ಕಾಲ, ತಾಯಿ–ತಂದೆ ಗುರುಗಳನ್ನು ಕತ್ತು ಹಿಡಿದು ಹೊರಗೆ ನೂಕಿ ಗತ್ತು ಗರ್ವ ತೋರಿಸುವ ಈ ಕಾಲ ಆ ಕಾಲ ಚೆಂದವೊ ಈ ಕಾಲ ಚೆಂದವೊ ?

ಚಿನ್ನದಂತಹ ಹೆಂಡತಿ ಮುತ್ತಿನಂತಹ ಮಕ್ಕಳು ಎಂದು ಪೂಜೆಗೈಯುತ್ತಿದ್ದ ಆ ಕಾಲ. ಸೋಮಾರಿ ಹೆಂಡತಿ ಹಠಮಾರಿ ಮಕ್ಕಳು ಸಾಕಪ್ಪ ದೇವರೆ ಈ ಸಂಸಾರ ॥ ಆ ಕಾಲ ಚೆಂದವೊ ಈ ಕಾಲ ಚೆಂದವೊ ?

**ಕಡ್ಯದ ಧನು,** ಅವಂದೂರು

# ಪಾಲೂರು ಶ್ರೀ ಮಹಾಲಿಂಗೇಶ್ವರಸ್ವಾಮಿ ದೇವಸ್ಥಾನದ ಶಿಲಾಶಾಸನ

**ಕೊ**ಡಗು ಸಂಚಿಕೆ 3ರಲ್ಲಿ ಪಾಲೂರು ಗ್ರಾಮದ ಶ್ರೀ 'ಕನ್ನಂಬಾಡಿ ಅಮ್ಮ'ನವರ ಚರಿತ್ರೆಯನ್ನು ಸೂಕ್ಷ್ಮವಾಗಿ ಬರೆದು ಓದುಗರೊಂದಿಗೆ ಹಂಚಿಕೊಂಡಿರುವುದನ್ನು ಇಲ್ಲಿ ನೆನಪಿಸಿಕೊಂಡು ಅದೇ ಗ್ರಾಮದ ನಾಡದೇವರಾಗಿ ಆರಾಧಿಸಲ್ಪಡುವ ಮಹಾಲಿಂಗೇಶ್ವರ ಸ್ವಾಮಿಯ ವಾರ್ಷಿಕ ಹಬ್ಬವು ಪ್ರತೀ ವರ್ಷ ಏಪ್ರಿಲ್ 18 ಮತ್ತು 19ರಲ್ಲಿ ನಡೆಯುವುದು.

ಈ ದೇವಸ್ಥಾನಕ್ಕೆ 14ನೇ ಶತಮಾನದ ಹಳೆಯ ಚರಿತ್ರೆಯನ್ನೊಳಗೊಂಡಿರುವ ಒಂದು ಶಿಲಾಶಾಸನವಿರುವುದು. ಆ ಸಮಯದಲ್ಲಿ ಕೊಡಗಿನ ಕೆಲವು ಭಾಗಗಳನ್ನು ಸಣ್ಣ ಸಣ್ಣ ಪಾಳೆಗಾರರಾದ ನಾಯಕರು ಆಳುತ್ತಿದ್ದರೆಂದು ಶಾಸನಗಳಿಂದ ಅಥವಾ ಇತರ ಆಧಾರಗಳಿಂದ ತಿಳಿದು ಬರುತ್ತದೆ. ಮತ್ತು ಕೆಲವೇ ನಾಡುಗಳನ್ನು ಆಳುತ್ತಿದ್ದ ನಾಯಕರು [ಅರಸರು] ಹೆಸರುವಾಸಿಯಾಗಿದ್ದರು.

ಕೊಡಗಿನ ತಾವುನಾಡಿನಲ್ಲಿ ಮೇಲ್ಮುಂಡಿ ಕುಞ್ಞ ಅರಸನು ಆಳುತ್ತಿದ್ದನೆಂದು ಭಾಗಮಂಡಲದಲ್ಲಿರುವ ಶಿಲಾಶಾಸನದಿಂದ ತಿಳಿಯುತ್ತದೆ. ಆ ಸಮಯದಲ್ಲಿ ಕುಞ್ಞ ಅರಸನ ಅಧಿರಾಜನಾಗಿ ಬೋಧರೂಪ ಭಾಗವರ್ ಎಂಬ ಅರಸು ಇದ್ದಂತೆ ತಿಳಿಯುತ್ತದೆ. ಆದರೆ ಈತನು ತಾನೇ ಆಳಿದಂತೆ ಕಾಣುವುದಿಲ್ಲ. ಈ ಅರಸನ ವಂಶದವರು ಹಾಸನ ತಾಲೂಕಿನ ನೈಋತ್ಯದಲ್ಲಿರುವ ಮಹಾರಾಜ ದುರ್ಗದಲ್ಲಿ ಆಳುತ್ತಿದ್ದರೆಂದು ತಿಳಿಯುತ್ತದೆ. ಯಾಕೆಂದರೆ ಮೂಡುಗೆರೆಯ 87ನೇ ಶಾಸನದಲ್ಲಿ ಬೋಧಮಹಾದೇವನೆಂಬುವನು ಕ್ರಿ.ಶ. 1321ರಲ್ಲಿ ವಿಜಯನಗರದಲ್ಲಿ ಬುಕ್ಕರಾಯನು ಆಳುತ್ತಿದ್ದಾಗ ದುರ್ಗದಲ್ಲಿ ಆಳುತ್ತಿದ್ದನೆಂದು ಹೇಳಿದೆ. ಈತನು ಪುರುಷೋತ್ತಮ ಪರಿಷತ್ತಿನ ಅವಿದ್ಯಾಮೃತ್ಯುಭಟ್ಟಾರಕನೆಂಬ ಗುರುವಿನ ಶಿಷ್ಯನೆಂದು ಶಾಸನದಲ್ಲಿ ಬರೆಯಲ್ಪಟ್ಟಿದೆ. ಈ ಅರಸನು ಉತ್ತರ ಮಲಬಾರಿನವನು ಆಗಿದ್ದಿರಬಹುದೆಂಬುದಕ್ಕೆ ಕೆಲವು ಕಾರಣಗಳು ಸಿಕ್ಕುತ್ತವೆ.

ಈ ಅರಸನು ಕುಯ್ಯಂಗೇರಿನಾಡಿನ ಮಹಾಲಿಂಗೇಶ್ವರ ಪೂಜೆಗೂ , ಭಗಂಡಾಶ್ರಮ ಅಂದರೆ ಭಾಗಮಂಡಲದ ಭಗಂಡೇಶ್ವರ ದೇವರ ಪೂಜೆಗೂ ವ್ಯವಸ್ಥೆಗೊಳಿಸಿದ ವಿವರಗಳು,ಈ ಎರಡು ದೇವಸ್ಥಾನಗಳಲ್ಲಿರುವ ಶಿಲಾಶಾಸನಗಳಿಂದ ತಿಳಿದು ಬರುತ್ತದೆ. 106ಕ್ಕೂ ಹೆಚ್ಚಿಗೆ ಕೊಡಗಿನಲ್ಲಿ ದೊರೆತಿರುವ ಶಿಲಾಶಾಸನಗಳ ವೀರಗಲ್ಲುಗಳ ಪೈಕಿ ಈ ಎರಡು ಶಿಲಾಶಾಸನಗಳು ಮಾತ್ರ ತಮಿಳು ಅಕ್ಷರದಲ್ಲಿ ಬರೆದವು. ಆದರೆ ಅವುಗಳ ಭಾಷೆಯು ಪ್ರಾರಂಭದಲ್ಲಿ ಸಂಸ್ಕೃತದಲ್ಲಿದ್ದು ಸುಮಾರು 4, 5ನೇ ಚರಣದಿಂದ ತಮಿಳು ಮಲೆಯಾಳದ ಹಳೆಯ ಗ್ರಂಥಾಕ್ಷರ ಮತ್ತು ಕೆಲವು ವಟ್ಟೆಳತ್ತು ಅಕ್ಷರಗಳು ಇವುಗಳ ಮಿಶ್ರಣವಾಗಿವೆ.

ಪಾಲೂರು ಮಹಾಲಿಂಗೇಶ್ವರ ದೇವಸ್ಥಾನದಲ್ಲಿರುವ ಶಾಸನ ಹೀಗಿದೆ – ಸ್ವಸ್ತಿ ಶ್ರೀ ವಿನಾಯಕಂ ವಿಶೇಷಜ್ಞಂ ಗುರುಂ ದೇವೀಂ ಸರಸ್ವತೀನ । ಮಸ್ಕೃತ್ಯ ಯಥಾ । ಶಕ್ತ್ಯಾ ಕರಿಷ್ಯೆ ಶಾಸನಂ ಶುಭಂ ಸ್ವಸ್ತಿ । ಶ್ರೀಮತ್ ಪುರುಷೋತ್ತಮ ವರ್ಷದ ಅವಿದ್ಯಾಮೃತ್ಯುಭಟ್ಟಾರಕ ಶಿಷ್ಯ ಬೋಧರೂಪಭಗವರ್ ಪಾಲಯೂರ್ ಮಹಾದೇವಕ್ಕುರ್ ಚ್ಚೆದ ಶಿಲಾಶಾಸನಂ ।

ಪದಿನೆಣ್ಡೇಶಿ ಶ್ರೀ ವೈಷ್ಣವರ್ ಮುಂತಾನ । ಪದಿನೆಣ್ಡೇಶಿ ವಲಂಚಿಯರ್ ಪದಿನೆಣ್ಡೇಶಿಪ್ಪಡ ಪಿಡಿಚ್ಚ ಪಲ್ಲಾಯಿರವರ್ ಪದಿನೆಟ್ಟು । ನಾಟು ಬ್ರಾಹ್ಮಣರಿವಗಳಿಲ್ ಕಂಡಾರ್ ಕಂಡಿ ರಿಕ್ಷಕ್ಕ ಕಡವರ್ ಎನ್ರು ಚ್ಚೆದ ಶಿಲಾಶಾಸನಂ ಅವದು ಶಾಂತಿ ನೋಡು ಪೂವಿಸ್ಥಾ । ನ ನ್ನೋಕಿಯಮ ಚ್ಚಾಮುಚ್ಚಪನ । ಚೆಲುಡಿತ್ತಾನಾಗಿಲ್‌ತನ್ ತಂದೆ । ಯ್ಯೆಕೊನ್‌ರುನ್‌ತಾಯ್ಯೆ ಕಲತ್ರಮ್ ವಚ್ಚುನ್‌ತಾಮ್ ಪಿರಂದ । ನಾಡುವಾಳು ಮರ್ವೈತ್ತಾನ್ ಕೊನ್‌ರವನ್ ನಾಟ್ಟುಲ್‌ವಲತ್ತು ಕೆಟ್ಟುಯಿಡತ್ತು ಪಿಡಿಚ್ಚಾನ್ಯೆ ಮುಕಾ ಅರುತ್ ಅವನ್ ಪಿಡಿಯ್ಯೆ ಕಳ । ತ್ರಂವಚ್ಚಾನ್ ಪಡಕ್ಕಡವ ದಂಡಂ ಪಡಕ್ಕ। ಡವನ್ ನಿತ್ಯಚ್ಚಿಲವುಂ ಮಿಕ್ಕಸಂಕೇತಂ। ಗಳುಂ ಶ್ರೀ ಭಂಡಾರ ಪೊತ್ತಗಂ ಆಟೋರುಕ್ಕಾಲ್ ಎಡುತ್ತು ವಾಶಿಪಿತ್ತು ಅದಿಲ್‌ಪಟ್ಟ ಪ। ಡಿಚೆಲ್ಲಾದ ಚಿಲವು ಚೆಲುಟ್ಟಕ್ಕಡ। ವರ್ ಪದಿನೆಣ್ಡೇಶಿ ವಲಂಚಿಯರ್ ನಾಲು ಮುತ್ತಾಮುಯ್ಯಾಲ ಮುನೂರ್ಕ ಮುಂತಯಿ"

ಮಂಗಳವಾಗಲಿ, ವಿಶೇಷ ಜ್ಞಾನವನ್ನು ಪಡೆದವರ ಗುರುವಾದ ವಿನಾಯಕನಿಗೂ ಸರಸ್ವತಿಗೂ ನಮಸ್ಕರಿಸಿ ನನಗೆ ಶಕ್ತಿ ಇರುವಷ್ಟು ಈ ಶುಭ ಶಾಸನವನ್ನು ಮಾಡುವೆನು ಮಂಗಳವಾಗಲಿ

ಶ್ರೀಮತ್ ಪುರುಷೋತ್ತಮ ಪರಿಷತ್ತಿನ ಅವಿಧ್ಯಾಮೃತ್ಯು ಭಟ್ಟಾರಕನ ಶಿಷ್ಯ ಬೋಧರೂಪ ಭಾಗವರ್ ಪಾಲಯೂರ್ ಮಹಾದೇವರಿಗೆ ಮಾಡಿದ ಶಿಲಾಶಾಸನವು–ಹದಿನೆಂಟು ದೇಶಗಳ ಶ್ರೀ ವೈಷ್ಣವರೂ ಹದಿನೆಂಟು ದೇಶಗಳ ವರ್ತಕರು ಹದಿನೆಂಟು ನಾಡುಗಳ ಬ್ರಾಹ್ಮಣರೂ ಇದನ್ನು ನೋಡಿ ರಕ್ಷಿಸುವರು ಎಂದು ಮಾಡಿದ ಶಿಲಾಶಾಸನವಿದು. ದೇವಸ್ಥಾನವನ್ನೂ ದೇವತಾರ್ಚನೆಯ ಆವಶ್ಯಕತೆಗಳನ್ನೂ ಪರೀಕ್ಷಿಸಿದ ಮೇಲೆ ಅನುಚ್ಛಾನನು [ಬಹುಷಃ ದೇವಸ್ಥಾನದ ಅಧಿಕಾರಿ]ನಿರ್ಧರಿಸಿದಂತೆ ಮೊಬಲಗನ್ನು ಯಾರು ಸಲ್ಲಿಸುವುದಿಲ್ಲವೊ, ಆತನು ಯಾರು ತನ್ನ ತಂದೆಯನ್ನು ಕೊಂದಿರುತ್ತಾನೊ, ಯಾರು ತನ್ನ ತಾಯಿಯನ್ನು ತನ್ನ ಪತ್ನಿಯಾಗಿ ಇಟ್ಟುಕೊಳ್ಳುತ್ತಾನೊ, ಯಾರು ತಾನು ಹುಟ್ಟಿದ

ನಾಡಿನ ರಾಜನನ್ನು ಕೊಂದು ಹಾಕುತ್ತಾನೊ, ಅಥವಾ ಯಾರು ಬಲಭಾಗದಲ್ಲಿ ಕಟ್ಟಲ್ಪಟ್ಟಿರುವ ಒಬ್ಬನನ್ನು ಎಡಭಾಗದಿಂದ ಹಿಡಿದು ಆತನ ಮೂಗನ್ನು ಕತ್ತರಿಸಿ ಹಾಕಿಬಿಡುತ್ತಾನೊ ಅಥವಾ ಯಾರು ತಾನು ವಿವಾಹವಾಗಬಾರದ ರಕ್ತಸಂಬಂಧಿಗಳೊಡನೆ ವಿವಾಹ ಸಂಬಂಧನವನ್ನು ಮಾಡಿಕೊಳ್ಳುವನೊ ಆತನಿಗಾಗುವ ಶಿಕ್ಷೆಗೆ ಬಾಧ್ಯನಾಗುತ್ತಾನೆ.

ಹದಿನೆಂಟು ದೇಶಗಳ ವರ್ತಕರು ಮತ್ತು ಇತರರು ದೇವ ಸ್ಥಾನದ ಭಂಡಾರದ ಪುಸ್ತಕದಲ್ಲಿ ಬರೆದಿಟ್ಟಿರುವ ಬೇರೆ ಸಾಮಗ್ರಿಗಳನ್ನು ಮತ್ತು ನಿತ್ಯದ ಖರ್ಚುಗಳನ್ನು ವರ್ಷಕ್ಕೊಮ್ಮೆ ಒದಗಿಸಿ ಕೊಡಬೇಕು. ಮತ್ತು ಅದರಲ್ಲಿ ಬರೆದಿರುವ ಪ್ರತಿಯೊಂದು ವಿಷಯದಲ್ಲೂ ಯಾವುದಾದರೂ ನಡೆಸುವುದಕ್ಕೆ ಬಿಟ್ಟು ಹೋಗಿದ್ದ ವಿಷಯವನ್ನು ಅದರಲ್ಲಿ ಬರೆದಿರುವ ಹಾಗೆ ಕ್ರಮವಾಗಿ ನಡೆಸುವಂತೆ ನೋಡಿಕೊಳ್ಳಬೇಕು.

○ ಬೈತಡ್ಕ ಎ. ಬೆಳ್ಯಪ್ಪ, ಮಡಿಕೇರಿ

ಸಂಗ್ರಹ : ಡಿ. ಯನ್. ಕೃಷ್ಣಯ್ಯನವರ 'ಕೊಡಗಿನ ಇತಿಹಾಸ'

## ಭಾಗಮಂಡಲದಲ್ಲಿ ಗೌಡ ಮಹಿಳಾ ಒಕ್ಕೂಟ ರಚನೆ

ದಿನಾಂಕ 25-1-98ರಲ್ಲಿ ಭಾಗಮಂಡಲ ನಾಡಿನ ವ್ಯಾಪ್ತಿಯಲ್ಲಿ ಮಹಿಳಾ ಒಕ್ಕೂಟದ ಸಭೆಯೊಂದು ನಡೆಯಿತು. ಮಹಿಳಾ ಒಕ್ಕೂಟದ ಅಧ್ಯಕ್ಷರಾಗಿ ಶ್ರೀ ಕುಯ್ಯಮುಡಿ ಸುಮಿತ್ರ ನಂದರನ್ನು, ಉಪಾಧ್ಯಕ್ಷರಾಗಿ ಪೊನ್ನೇಟಿ ರಾಜಮ್ಮ ಭಾಸ್ಕರ ನವರನ್ನು, ಕಾರ್ಯದರ್ಶಿಯಾಗಿ ಶ್ರೀಮತಿ ಕುದುಕುಳಿ ಇಂದಿರಾ ಭರತರನ್ನು ಆರಿಸಲಾಯಿತು. ಸುಮಾರು 25 ಕ್ಕಿಂತಲೂ ಹೆಚ್ಚಿನ ಮಹಿಳೆಯರು ಸದಸತ್ವವನ್ನು ಪಡೆದಿರುವುದಲ್ಲದೆ ಮಹಿಳೆಯರ ಏಳಿಗೆ, ಐಕ್ಯತೆಗೆ ಪರಸ್ಪರ ಸಹಕಾರದೊಂದಿಗೆ ಶೀಘ್ರವಾಗಿ ಮುಂದುವರಿಯುವುದಾಗಿ ಕಾರ್ಯದರ್ಶಿ ಇಂದಿರಾ ಭರತ್ ತಿಳಿಸಿದ್ದಾರೆ.

ವರದಿ : ಪೊನ್ನೇಟಿ ಸುನೀಲ್

## ಕರಾಟೆ ಛಾಂಪಿಯನ್‌ನಲ್ಲಿ ತರಬೇತಿ ಪಡೆದ ತೋಟಂಬೈಲು ಶ್ಯಾಮ್ ಬೋಪಯ್ಯ

ಮಡಿಕೇರಿ ತಾಲ್ಲೋಕು ಕಡಿಯತ್ತ್ ನಾಡು ನರಿಯಂದಡ ಗ್ರಾಮದ ತೋಟಂಬೈಲು ಬೋಪಯ್ಯನವರ 5 ಜನ ಗಂಡು



ಶ್ಯಾಮ್

ಮತ್ತು ಒಂದು ಹೆಣ್ಣು ಮಕ್ಕಳಲ್ಲಿ ಕೊನೆಯವನಾದ ಶ್ಯಾಮ ಕರಾಟೆ ಛಾಂಪಿಯನ್ ನಲ್ಲಿ ಎಕೆನೂ ಗುಜುರಿಯು ಕರಾಟೆ-ಡೂ ಉನ್ನಿಕೃಷ್ಣರವರ ಗರಡಿಯಲ್ಲಿ ತರಬೇತಿ ಹೊಂದಿದ್ದಾರೆ. 1996 ಜೂನ್ ತಿಂಗಳಲ್ಲಿ ಮದ್ರಾಸಿನಲ್ಲಿ ನಡೆದ ಕರಾಟೆ ಸ್ಪರ್ಧೆಯಲ್ಲಿ ದ್ವಿತೀಯ ಸ್ಥಾನ ಪಡೆದಿದ್ದಾರೆ.




ಗುರು ಉನ್ನಿಕೃಷ್ಣರವರ ಸಂಗಡ ಇದೇ ಮೇ ತಿಂಗಳಲ್ಲಿ ಉನ್ನತ ತರಬೇತಿ ಕೊಡುವ ಸಲುವಾಗಿ ಅಭಿದಾಭಿಗೆ ತೆರಳಿ 3 ವರ್ಷಗಳ ನಂತರ ವಾಪಸ್ಸು ಬರಲಿದ್ದಾರೆ.

ಜಿಲ್ಲಾ ಮಟ್ಟದಲ್ಲಿ ಹಲವಾರು ಪ್ರಶಸ್ತಿ ಗಳಿಸಿರುವುದು ಅಲ್ಲದೆ, ತಾನೇ ಸ್ವತಃ ಹಲವಾರು ಮಂದಿಗೆ ಕರಾಟೆ ಕಲಿಸಿದ್ದಾರೆ. ಹಾಗೂ ಕಲಿಸುವ ಉತ್ಸಾಹವನ್ನು ಹೊಂದಿದ್ದಾರೆ.

1973, ಜೂನ್ 26 ರಂದು ಜನಿಸಿದ ಇವರು ಈ ಚಿಕ್ಕ ವಯಸ್ಸಿನಲ್ಲಿ ಮಾಡಿಡ ಇವರ ಸಾಧನೆ ನಿಜವಾಗಿಯೂ ಮೆಚ್ಚುವಂತದ್ದು, ಇವರ ವಿದೇಶ ಪ್ರಯಾಣಕ್ಕೆ ಹಾಗೂ ಭವಿಷ್ಯಕ್ಕೆ ಜನಾಂಗದ ಪರವಾಗಿ ಕೊಡಗು ಸಂಗಾತಿ ಶುಭ ಹಾರೈಸುತ್ತದೆ.

○ ಎಂ.ಕೆ. ರಮೇಶ್, ಮೈಸೂರು

### ಜ್ಞಾನೋಕ್ತಿಗಳು

○ ಸತ್ಪುರುಷನ ನುಡಿಯು ಆಳವಾದ ನೀರು, ಜ್ಞಾನದ ಬುಗ್ಗೆ ಹರಿಯುವ ತೊರೆ.

○ ಬುದ್ಧಿಯನ್ನು ಸಂಪಾದಿಸುವವನು ತನಗೆ ತಾನೇ ಮಿತ್ರ.

## 1997ನೆಯ ಸಾಲಿನ ಸುರಕ್ಷಾಚಾಲಕ ಪ್ರಶಸ್ತಿ: ದೇಶ್‌ಕೋಡಿ ಮುತ್ತಣ್ಣ ಬೋಪಯ್ಯ

1995 ನೇ ಸಾಲಿನ ಕರ್ನಾಟಕ ಸರಕಾರದ ಸುರಕ್ಷಾ ಚಾಲಕ ಪ್ರಶಸ್ತಿಯನ್ನು ಶ್ರೀ ದೇಶ್‌ಕೋಡಿ ಮುತ್ತಣ್ಣ ಪಡೆದಿದ್ದಾರೆ ಇವರು 1980 ರಲ್ಲಿ ಬಿ.ಟಿ.ಎಸ್. ನಲ್ಲಿ 9 ವರ್ಷಗಳ ಸೇವೆ ಸಲ್ಲಿಸಿದ್ದಾರೆ. ನಂತರ ಮಂಗಳೂರು ಡಿಪೋನಲ್ಲಿ ಸೇವೆ ಸಲ್ಲಿಸುತ್ತಿದ್ದು, ಸರ್ಕಾರದ 1995 ನೇ ಸಾಲಿನ "ಸುರಕ್ಷಾ ಚಾಲಕ" ಪ್ರಶಸ್ತಿಯನ್ನು ಮಂಗಳೂರು ವಿಭಾಗದಿಂದ ಪಡೆದಿರುತ್ತಾರೆ. ಕರ್ತವ್ಯದಲ್ಲಿ ಅಪಘಾತ ರಹಿತ ಸೇವೆಗಾಗಿ ಮುಖ್ಯಮಂತ್ರಿ ಅವರಿಂದ ಬೆಳ್ಳಿ ಪದಕ ಮತ್ತು ರೂ. 5,000 ನಗದನ್ನು ತಾ. 5-1-98 ರಲ್ಲಿ ನೀಡಿ ಸನ್ಮಾನಿಸಲಾಯಿತು.



**ದೇಶ್‌ಕೋಡಿ ಮುತ್ತಣ್ಣ ಬೋಪಯ್ಯ**

ದೇಶ್‌ಕೋಡಿ ಮುತ್ತಣ್ಣ ಅವರ 3ನೇ ಮಗನಾಗಿದ್ದು, ಅರವತ್ತೊಕ್ಲು ಗ್ರಾಮದ ಗುಡ್ಡೇರ ಪೂವಯ್ಯನವರ ಮಗಳಾದ ಪ್ರೇಮಲತರನ್ನು ವಿವಾಹವಾಗಿ ಎರಡು ಮಕ್ಕಳ ಸುಖಿ ಕುಟುಂಬ ಹೊಂದಿದ್ದಾರೆ.

ಕೊಡಗು ಸಂಗಾತಿಯು ಇವರ ಸಾಧನೆಯನ್ನು ಮೆಚ್ಚಿ ಜನಾಂಗದ ಸರ್ವರಿಗೂ ತಿಳಿಯಪಡಿಸುತ್ತಾರೆ.

**– ಅಮ್ಮಾಜೀರ ಪೊನ್ನಪ್ಪ**
ಕಾವೇರಿನಾಡು
ಬೆಂಗಳೂರು

## ವರದಿ

ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲಾ ಗೌಡ ಮಹಿಳಾ ಸಂಘಟನೆ, ಮೈಸೂರು ಇದರ ಮಾಸಿಕ ಸಭೆಯು ದಿನಾಂಕ 8-3-98ರ ಭಾನುವಾರ ಮಧ್ಯಾಹ್ನ 2-30ಕ್ಕೆ ಕೊಡಗು ಗೌಡ ವಿದ್ಯಾಸಂಘ ಜಯಲಕ್ಷ್ಮಿಪುರಂ, ಇಲ್ಲಿ ನಡೆಯಿತು. ಅಂದಿನ ಸಭೆಯ ಅಧ್ಯಕ್ಷರಾಗಿ ಕಡ್ಯದ ಸರೋಜ ಚುಂಡಯ್ಯ ಹಾಗೂ ಮುಖ್ಯ ಅತಿಥಿಗಳಾಗಿ ಅಚ್ಚಿಪಟ್ಟಿರ ಮನೋರಮ ಪುಟ್ಟಪ್ಪ ಅವರು ವಹಿಸಿದ್ದರು. ಕುಮಾರಿ ಗೀತಾ ಮೋಂಟಡ್ಕರವರ ಪ್ರಾರ್ಥನೆಯಿಂದ ಕಾರ್ಯಕ್ರಮ ಆರಂಭವಾಗಿ, ಓಡಿಯನ ಝಾನ್ಸಿ ಅವರು ಸ್ವಾಗತಿಸಿದರು. ಕಾರ್ಯದರ್ಶಿಯವರಿಂದ ವರದಿ ವಾಚನ ಪ್ರಾರಂಭವಾಗಿ ಉಪಾಧ್ಯಕ್ಷರಾದ ಕುಂಭಗೌಡನ ಮುತ್ತಮ್ಮನವರು ಸಭೆಯ ಉದ್ದೇಶವನ್ನು ವಿವರಿಸಿದರು. ಅನಂತರ ಮುಂದಿನ ಕಾರ್ಯಕ್ರಮದ ಬಗ್ಗೆ ಚರ್ಚಿಸಲಾಯ್ತು.

ಸಭೆಯನ್ನುದ್ದೇಶಿಸಿ ಮಾತನಾಡಿದ ಅಚ್ಚಿಪಟ್ಟಿರ ಮನೋರಮರವರು–ಎಲ್ಲರೂ ಸೇರಿ ಸಹಕರಿಸಿದರೆ ಮಾತ್ರ ಸಂಘಟನೆ ಸಾಧ್ಯ. ಗಂಡಸರಿಗಿಂತ ಹೆಂಗಸರೇ ಅಧಿಕ ಸಂಖ್ಯೆಯಲ್ಲಿ ವಿದ್ಯಾವಂತರಾಗಿದ್ದರೂ ಸಮಾಜ ಸೇವೆಯಲ್ಲಿ ತೊಡಗಿಸಿಕೊಳ್ಳಲು ಮನೆಯ ಗಂಡಸರು ಪ್ರೋತ್ಸಾಹ ನೀಡುತ್ತಿಲ್ಲ. ಗಂಡಸರು ಇದಕ್ಕೆ ಸಹಕರಿಸುವಂತಾಗಬೇಕು ಎಂದು ಕರೆ ಇತ್ತರು. ಪ್ರತಿಯೊಬ್ಬನಲ್ಲೂ ಪ್ರತಿಭೆ ಇದೆ. ಅದನ್ನು ಬೆಳಸಿಕೊಳ್ಳಬೇಕು, ಹತ್ತು ಜನರ ಮುಂದೆ ನಾವು ಹೇಗೆ ರೂಪಿತವಾಗಬೇಕು ಎಂಬುದನ್ನು ತಿಳಿದುಕೊಂಡು ಅದರಂತೆ ನಡೆಯಬೇಕು ಎಂದು ಹೇಳಿದರು.

ಅಧ್ಯಕ್ಷ ಸ್ಥಾನದಿಂದ ಮಾತನಾಡಿದ ಕಡ್ಯದ ಸರೋಜ ಚುಂಡಯ್ಯ ಅವರು, ನಮ್ಮಲ್ಲಿ ಕೀಳರಿಮೆ ಜಾಸ್ತಿ. ನಮ್ಮಲ್ಲಿರುವ ಉದಾಸೀನ ಮನೋಭಾವವೇ ನಮ್ಮನ್ನು ಮುಂದಕ್ಕೆ ಬರಲು ಬಿಡುತ್ತಿಲ್ಲ. ಸಂಘಟನೆ ಅಂದಾಗ ಕೇವಲ ಒಂದೆಡೆ ಸೇರಿ ಹರಟೆ ಹೊಡೆಯುವುದಲ್ಲ. ನಾವು ನಮ್ಮ ರೀತಿ ನೀತಿಗಳಿಂದ ಸಂಸ್ಕೃತಿಯನ್ನು ಬೆಳೆಸಿ ಉಳಿಸಿಕೊಂಡು ಬರಬೇಕು ಎಂದು ತಿಳಿಸಿದರು.

ಅಧ್ಯಕ್ಷರಾಗಿದ್ದ ಧನು ಚೆರಿಯಮನೆ ಅವರಿಗೆ ಅನಿವಾರ್ಯ ಕಾರಣಗಳಿಂದ ನಮ್ಮ ಸಭೆಗೆ ಭಾಗವಹಿಸಲು ಆಗದೇ ಇರುವುದರಿಂದಾಗಿ ಅವರ ಅನುಮತಿ ಮೇರೆಗೆ ಇಂದಿನ ತನಕ ಉಪಾಧ್ಯಕ್ಷರಾದ ಕುಂಭಗೌಡನ ಮುತ್ತಮ್ಮನವರನ್ನು ಎಲ್ಲಸಭಿಕರ ಸಮ್ಮುಖದಲ್ಲಿ ಕರತಾಡನದೊಂದಿಗೆ ನಮ್ಮ ಮುಂದಿನ ಅಧ್ಯಕ್ಷರು ಎಂದು ಘೋಷಿಸಲಾಯಿತು. ಧನು ಚೆರಿಯಮನೆಯವರು ಇನ್ನು ಮುಂದೆ ಉಪಾಧ್ಯಕ್ಷರಾಗಿ ಕಾರ್ಯ ನಿರ್ವಹಿಸುವರು. ಕೊನೆಯಲ್ಲಿ ಸಹ ಕಾರ್ಯದರ್ಶಿ ಚೆಟ್ಟಿನೂಡ ಲಕ್ಷ್ಮಿ ರಘುಪತಿಯವರು ವಂದಿಸಿದರು. ಆ ದಿನದ ಕಾಫಿ/ತಿಂಡಿಯ ವ್ಯವಸ್ಥೆಯನ್ನು ಮಾಡಿದ ಕುಂಭಗೌಡನ ಮುತ್ತಮ್ಮ ಹಾಗೂ ಚೆಟ್ಟಿನೂಡ ಲಕ್ಷ್ಮಿ ರಘುಪತಿಯವರಿಗೆ ಸಭೆ ಕೃತಜ್ಞತೆಯನ್ನು ಅರ್ಪಿಸಿತು.

○ ವರದಿ - **ಗೀತಾ ಮೋಂಟಡ್ಕ**

## ನಿಮಗಿದು ತಿಳಿದಿರಲಿ

- ○ ಕನ್ನಡದಲ್ಲಿ ನವೋದಯ ಸಾಹಿತ್ಯದ ಹೆದ್ದಾರಿಯನ್ನು ನಿರ್ಮಿಸಿದವರು - ಬಿ. ಎಂ ಶ್ರೀಕಂಠಯ್ಯ
- ○ ಕನ್ನಡದಲ್ಲಿ ನವೋದಯ ಸಾಹಿತ್ಯ ಕಾಣಿಸಿಕೊಂಡಿದ್ದು– 20ನೇ ಶತಮಾನದಿಂದ

## ಕರ್ನಾಟಕ ಲೋಕಸೇವಾ ಆಯೋಗ, ಪಾರ್ಕ್‌ಹೌಸ್, ಬೆಂಗಳೂರು.

ಸಂಖ್ಯೆ ಇ[1] : 15051 : ಪಿಎಸ್‌ಸಿ : 97–98 ದಿನಾಂಕ : 9–3–98

## ಸಂಕ್ಷಿಪ್ತ ಅಧಿಸೂಚನೆ

ದಿನಾಂಕ 9–3–98 ರಂದು ಈ ಕೆಳಕಂಡ ಹುದ್ದೆಗಳಿಗೆ ಪೂರ್ವಭಾವಿ (ಪ್ರಿಲಿಮಿನರಿ) ಪರೀಕ್ಷೆಗೆ ಅರ್ಜಿಯನ್ನು ನಿಗದಿಪಡಿಸಿದ ನಮೂನೆಯಲ್ಲಿ ಆಹ್ವಾನಿಸಿದೆ.

ಸಮೂಹ—ಎ

1. ಕರ್ನಾಟಕ ಆಡಳಿತ ಸೇವೆ
   ಸಹಾಯಕ ಆಯುಕ್ತರು [ರೆವಿನ್ಯೂ]
2. ಲೆಕ್ಕ ಪತ್ರ ಸೇವೆ–ಸಹಾಯಕ ನಿಯಂತ್ರಕರು
3. ವಾಣಿಜ್ಯ ತೆರಿಗೆ ಸೇವೆ–ಸಹಾಯು ಕ ಆಯುಕ್ತರು
4. ಖಜಾನೆ ಸೇವೆ-ಖಜಾನೆ ಅಧಿಕಾರಿ
5. ಕಾರ್ಮಿಕ ಸೇವೆ–ಸಹಾಯಕ ಕಾರ್ಮಿಕ ಆಯುಕ್ತರು
6. ಸಾಮಾನ್ಯ ಸೇವೆ [ಸಮಾಜ ಕಲ್ಯಾಣ ಇಲಾಖೆ]

ಒಟ್ಟು 103

ಸಮೂಹ—ಬಿ

1. ಕರ್ನಾಟಕ ಆಡಳಿತ ಸೇವೆ–ತಹಸೀಲ್ದಾರ್
2. ವಾಣಿಜ್ಯ ತೆರಿಗೆ ಸೇವೆ–ವಾಣಿಜ್ಯ ತೆರಿಗೆ ಅಧಿಕಾರಿಗಳು
3. ಕಾರ್ಮಿಕ ಸೇವೆ–ಕಾರ್ಮಿಕ ಅಧಿಕಾರಿ
4. ಕಾನೂನು ಮಾಪನ ಶಾಸ್ತ್ರ ಸೇವೆ–ಕಾನೂನು ಮಾಪನ
   ಸಹಾಯಕ ನಿರ್ದೇಶಕರು
5. ಕರ್ನಾಟಕ ಸಹಕಾರಿ ಸೇವೆ
   ಸಹಕಾರಿ ಸಂಘಗಳ ಸಹಾಯಕ ರಿಜಿಸ್ಟ್ರಾರ್
6. ಕರ್ನಾಟಕ ಸಾಮಾನ್ಯ ಸೇವೆ
   (ಯುವಜನ ಸೇವೆಗಳ ನಿರ್ದೇಶನಾಲಯ)
   ಜಿಲ್ಲಾ ಯುವಜನ ಸೇವಾಧಿಕಾರಿ ವ್ಯವಸ್ಥಾಪಕ
7. ಉದ್ಯೋಗ ಮತ್ತು ತರಬೇತಿ ಸೇವೆ
   ಉದ್ಯೋಗಾಧಿಕಾರಿ
8. ಕರ್ನಾಟಕ ಸಾಮಾನ್ಯ ಸೇವೆ
   [ಯುವಜನ ಸೇವಾ ನಿರ್ದೇಶನಾಲಯ]
   ಯುವಜನ ಸೇವಾಧಿಕಾರಿ–ವ್ಯವಸ್ಥಾಪಕ ರವೀಂದ್ರ
   ಕಲಾಕ್ಷೇತ್ರ
9. ಭೂ ಮಾಪನ ಕಂದಾಯ ವ್ಯವಸ್ಥೆ
   ಸಹಾಯಕ ನಿರ್ದೇಶಕರು
10. ಪೌರಾಡಳಿತ ಸೇವೆ
    ಮುಖ್ಯಾಧಿಕಾರಿ ಶ್ರೇಣಿ–1
11. ಖಜಾನೆ ಸೇವೆ
    ಖಜಾನೆ ಅಧಿಕಾರಿ
12. ಮಾರುಕಟ್ಟೆ ಸೇವೆ
    ಜಿಲ್ಲಾ ಮಾರುಕಟ್ಟೆ ಅಧಿಕಾರಿ
13. ಆಹಾರ ಮತ್ತು ನಾಗರೀಕ ಸರಬರಾಜು ಸೇವೆ
    ಸಹಾಯಕ ನಿರ್ದೇಶಕರು
14. ಲೆಕ್ಕ ಪರಿಶೋಧನಾ ಸೇವೆ
    ಸಹಾಯಕ ಮುಖ್ಯ ಲೆಕ್ಕ ಪರಿಶೋಧಕರು
15. ಸಾಮಾನ್ಯ ಸೇವೆ
    [ಅಭಿವೃದ್ಧಿ ಶಾಖೆ ಮತ್ತು ಸ್ಥಾನೀಯ ಸರ್ಕಾರ ಶಾಖೆ]
    ಕ್ಷೇತ್ರಾಭಿವೃದ್ಧಿ ಅಧಿಕಾರಿ

1] ಶೈಕ್ಷಣಿಕ ವಿದ್ಯಾರ್ಹತೆ : ಪದವಿ ಪರೀಕ್ಷೆ ಅಥವಾ ತತ್ಸಮಾನ ವಿದ್ಯಾರ್ಹತೆ

2] ವಯೋಮಿತಿ : ಕೊನೆಯ ದಿನಾಂಕಕ್ಕೆ ಕನಿಷ್ಠ 21 ವರ್ಷ ಪೂರೈಸಿರತಕ್ಕದ್ದು ಹಾಗೂ

1. ಸಾಮಾನ್ಯ ಅರ್ಹತೆ –33 ವರ್ಷಗಳು
2. ಪ್ರವರ್ಗ 2ಎ, 2ಬಿ, 3ಎ, 3ಬಿ–36 ವರ್ಷಗಳು
3. ಪ.ಜಾತಿ, ಪ. ಪಂಗಡ –38 ವರ್ಷಗಳು

3] ಪರೀಕ್ಷಾ ಕೇಂದ್ರ : 1. ಬೆಂಗಳೂರು 2. ಧಾರವಾಡ - ಹುಬ್ಬಳಿ 3. ಗುಲ್ಬರ್ಗಾ 4. ಮೈಸೂರು

4] ಅರ್ಜಿಗಳ ಲಭ್ಯತೆ : ಪೂರ್ವಭಾವಿ (ಪ್ರಿಲಿಮಿನರಿ ಎಕ್ಸಾಮಿನೇಷನ್) ಪರೀಕ್ಷೆಗಳ 1998ರ ಪ್ರವೇಶ ಕೋರುವುದಕ್ಕಾಗಿ, ಕಿರುಹೊತ್ತಿಗೆಗಳನ್ನೊಳಗೊಂಡ ಅರ್ಜಿಗಳನ್ನು 25 ರೂ. ಬೆಲೆಗೆ ಈ ಸ್ಥಳಗಳಲ್ಲಿ ಪಡೆಯಬಹುದು.

1. ಸರ್ಕಾರಿ ವಿಭಾಗೀಯ ಪುಸ್ತಕ ಮಳಿಗೆಗಳು
2. ಸರ್ಕಾರಿ ಜಿಲ್ಲಾ ಪುಸ್ತಕ ಮಳಿಗೆಗಳು
3. ಅಧಿಕೃತ ಪುಸ್ತಕ ಮಾರಾಟಗಾರರು, ಏಜೆಂಟರು
4. ರಾಜ್ಯದ ಕೇಂದ್ರ ಪುಸ್ತಕ ಮಳಿಗೆ, ಬೆಂಗಳೂರು

# ನಿಮ್ಮ ಪತ್ರಗಳು

## ಮಹಾಜನರಲ್ಲಿ ವಿನಂತಿ

ಮಾನ್ಯರೇ,

ಫೆಬ್ರವರಿ 15 ರಿಂದ 28, 98 ನಿಮ್ಮ ಕೊಡಗು ಸಂಗಾತಿ ಸಂಚಿಕೆಯಲ್ಲಿ ಪೂಜಾರಿ ಪೊಣ್ಣಪ್ಪನವರ ವಿನಂತಿ, ಸಂಗಾತಿ ಓದುಗರಿಗೆ ಸಮಯೋಜಿತ ವಿನಂತಿ. ಅವರ ಸಲಹೆ ನಿಜಕ್ಕೂ ಒಳ್ಳೇಯದೆ. ಆದರೆ ಸಮಾಜ ಮುಂದಾಗುವುದು ಸಮಾಜದ ಕಾರ್ಯಕರ್ತರ ಮೇಲಿದೆ. ಇದರೊಟ್ಟಿಗೆ ನನ್ನದೊಂದು ಕಿರು ಸಲಹೆ.

ಮಾನ್ಯ ಓದುಗರು ಬಹು ಮೆಚ್ಚಿಗೆಯನ್ನು ಕೊಡಗು ಸಂಗಾತಿಗೆ ತೋರಿಸಿರುವುದು ಅಭಿನಂದನೆ. ತೋರಿಕೆ, ಕೇಳಿಕೆ, ಹೊಗಳಿಕೆಗಳಲ್ಲಿ ಯಾವ ಪತ್ರಕರ್ತರೂ ಬದುಕಲಾರರು. ಅಭಿನಂದನೆ ಕಳುಹಿಸುವವರು ಅಭಿನಂದನೆಗಳ ಜೊತೆಯಲ್ಲಿ 5-10 ಹೊಸ ಓದುಗರನ್ನು ಕೊಡಿಸಿ ಪತ್ರಿಕೆಗೆ ಚಂದಾದಾರರನ್ನಾಗಿ ಮಾಡಿಸಬಹುದು. ಪ್ರತಿ ಸ್ಥಳದಲ್ಲಿ ಸಮಾಜದ ಏಳ್ಗೆಗಾಗಿ, ಸಮಾಜ, ಸ್ತ್ರೀ ಸಮಾಜ, ಎಳೆಯರ ಸಮಾಜ ಕ್ರೀಡಾ ಸಮಾಜಗಳು ತಲೆ ಎತ್ತುತ್ತಿದೆ. ಇದು ತಮ್ಮ ಸಮಾಜದ ಉದ್ಧಾರ ಮೊದಲು ಮಾಡಬೇಕು. ಅದರಷ್ಟೇ ಪ್ರಾಮುಖ್ಯ ಇತರರೊಂದಿಗೆ ಹೊಂದಾಣಿಕೆ ಹೊಂದಿರಬೇಕು.

ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಯುವಕ, ಯುವತಿಯರು, ಯಾರೇ ಇರಲಿ ಕೊಡಗು ಸಂಗಾತಿಗೆ ಜನರನ್ನು ಪ್ರೋತ್ಸಾಹಿಸಿ, ಅದರ ಮಹತ್ವ ತಿಳಿಸಿ, ಅದರ ಬೆಳವಣಿಗೆಯ ಮಹತ್ವವನ್ನು ಜನರಲ್ಲಿ ಮನದಟ್ಟು ಮಾಡಿ ತಮ್ಮ ತಮ್ಮ ಸಂಘದಿಂದ ಆದಷ್ಟು ಚಂದಾದಾರರನ್ನು ವಂತಿಗೆ ಸಮೇತ ಓದುಗರನ್ನಾಗಿ ಮಾಡಿದರೆ ಪತ್ರಿಕೆಗೆ ಶೋಭೆ ತರುತ್ತದೆ. ನಮ್ಮ ಹೊಗಳಿಕೆಗೆ ಪ್ರತಿಫಲ ದೊರೆಯುತ್ತದೆ.

ಈ ನಿಟ್ಟಿನಲ್ಲಿ ನಾನು ನನ್ನ ಅಳಿಲು ಸೇವೆ ಮಾಡಿದ್ದೇನೆ. ಹೇಳಿಕೊಳ್ಳುವಂತಾದ್ದೇನೂ ಅಲ್ಲ. ಆದರೆ ಬೇರೆ ಜನಾಂಗೀಯ ಜನರನ್ನು ಪತ್ರಿಕೆಯ ಓದುಗಾರರನ್ನಾಗಿ ಮಾಡಿದ್ದೇನೆ. ಅವರು ವಂತಿಗೆ ಕಳುಹಿಸಿ ಚಂದಾದಾರರಾಗಿದ್ದಾರೆ. ನಮ್ಮವರು ಏಕೆ ಹಿಂದೆ ಬೀಳಬೇಕು ?

ದಯವಿಟ್ಟು ನಾಡಿನ ಯುವಜನಾಂಗದವರು ಪರಿಶ್ರಮ ವಹಿಸಿ ಇಷ್ಟೊಂದು ಕಿಂಚಿತ್ ಕಾರ್ಯ ನಮ್ಮ ಸಮಾಜಕ್ಕೆ, ಸಮಾಜದ ಸಂಸ್ಕೃತಿ, ಸಂಪ್ರದಾಯ ರಕ್ಷಣೆಗೆ, ಸಮಾಜದ ಏಳ್ಗೆಗೆ ಅವಿರತ ದುಡಿವ ತಮ್ಮ ಜನಾಂಗದವರಲ್ಲಿ ಓದುವ ಹಂಬಲ ಹೆಚ್ಚಿಸಿ, ಓದುಗರನ್ನು ಹುರಿದುಂಬಿಸಿ ಸಂಚಿಕೆಯನ್ನು ಪ್ರೋತ್ಸಾಹಿಸಿ. ಸಂಚಿಕೆಯೇ ನಮಗೆ ಮನರಂಜನೆ.

ತಾವು ಒಳ್ಳೆಯ ವಿಶ್ವಾಸದಿಂದ ಪತ್ರಿಕೆಗಳನ್ನು ಕಳುಹಿಸುತ್ತಿರುವುದು ಒಳ್ಳೆಯದೆ. ಆದರೆ ಒಂದೆರಡು ಪತ್ರಿಕೆ ಕಳುಹಿಸಿ ಅವರಿಂದ ಪ್ರೋತ್ಸಾಹ ಬರದಿದ್ದರೆ ದಯ ದಾಕ್ಷಿಣ್ಯವಿಲ್ಲದೆ ಪುಕ್ಕಟೆ ಕಳುಹಿಸುವುದನ್ನು ನಿಲ್ಲಿಸಿ.

**ಚೇಂದ್ರಿಮಾಡ ಜಿ. ಮುತ್ತಪ್ಪ**, ಕುಶಾಲನಗರ

## ನಮ್ಮ ಉಡುಗೆನ ನಾವೆಲ್ಲ ಮರಿತೊಳೊ

ಗೌಡ ಜನಾಂಗದಲ್ಲಿ ಜನಿಸಿದ ನಾವು ಅರೆಭಾಷೆ ಮತ್ತೆ ನಮ್ಮ ಉಡುಗೆಗಳ್ನ ಮರಿಯದು ಬಹಳ ಬೇಸರದ ವಿಚಾರ, ಇತ್ತೀಚಿನ ದಿನಗಳಲ್ಲಿ ನಮ್ಮವು ಮದುವೆಗೆ, ಸಾವುಗೆ, ಶುದ್ಧಕ್ಕೆ ತಿಥಿಗೆ ಒಂದೆ ತರದ ಉಡಿಗೆ ಉಟ್ಟನೆ. ಮದುವೆಗೆ ಪಟ್ಟೆಸೀರೆ, ಸಾವು, ಶುದ್ಧ, ತಿಥಿಗಳಿಗೆ ಬಣ್ಣ ಬಣ್ಣದ ಸೀರೆಗ, ಬಣ್ಣ ಬಣ್ಣದ ಬಟ್ಟೆಗಳೆ ಹಾಕುವೆ. ಸಾವು, ತಿಥಿಗಳಲ್ಲಿ ಸತ್ತವರ ಆತ್ಮಕ್ಕೆ ಶಾಂತಿ ಸಿಗಲಿತ ಅಂದ್ ಎಲ್ಲವು ಹಾಕುದು ನಮ್ಮ ಪದ್ಧತಿಲಿ ಬಿಳಿಬಣ್ಣದ ಬಟ್ಟೆ. ಆ ಬಿಳಿ ಬಟ್ಟೆ ಹಾಕಿಬಂದರೆ, ಆ ಸಾವು ತಿಥಿ ಮನೆ ಎಷ್ಟೊಂದು ಶಾಂತಿಂದ ಕಂಡದೆ, ಆದರೆ ಇಂದ್‌ನ ದಿನಗಳಲಿ ಜನಗ ಹಾಕುವ ಬಟ್ಟೆಲಿ ಅವು ಸಾವುಗೆ ಹೋದವ, ಮದುವೆಗೆ ಹೋದವ ತಿಥಿಗೆ ಹೋದವಂತ ಗೋತ್ತಾದುಲೆ, ನಿಜವಾಗಿ ನಾವು ಕಷ್ಟ, ದುಃಖ ಕಾರ್ಯಕ್ಕೆ. ಹೂ ಯಿಲ್ಲದ ಬಿಳಿ ಬಟ್ಟೆಗಳನ್ನೆ ಹಾಕೊಕು. ಇಂತಹ ಲೋಪದೋಷಗಳನ್ನ ಗೌಡ ಸಮ್ಮೇಳನಗಳಲ್ಲಿ ಒಂದಾಗಿ ಚರ್ಚಿಸಿ ಇನ್ನಾದರ್ ನಮ್ಮ ಸಂಸ್ಕೃತಿನ ಎಲ್ಲಾ ಗೌಡ ಕುಲಸ್ಥರ್ ಉಳಿಸಿಕಂಡ್ ಬಂದರೆ ನಮ್ಮ ಸಂಸ್ಕೃತಿ ಉಳ್‌ದದೆ.

**ಕುಲ್ಲಚನ ತಾರ ರವಿ**

## ಯಶಸ್ವಿಯಾಗಲಿ

ಕೊಡಗು ಅರೆಭಾಷಿಕ ಸಾಂಸ್ಕೃತಿಕ ಸಮಿತಿ, ಮೈಸೂರು ಇವರು ಮೈಸೂರಿನ ಕಲಾಮಂದಿರದಲ್ಲಿ ಅರೆಭಾಷಿಕ ಸಾಂಸ್ಕೃತಿಕ ಕಾರ್ಯಕ್ರಮವನ್ನು ಹಮ್ಮಿಕೊಂಡಿರುವುದು ಸಂತೋಷದ ಸಂಗತಿ. ಈ ವರ್ಣರಂಜಿತ ಕಾರ್ಯಕ್ರಮದಲ್ಲಿ ಗೌಡಬಾಂಧವರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿ ಕಾರ್ಯಕ್ರಮವು ಸುಸೂಗತವಾಗಿ ನಡೆಯಲಿ, ಹಾಗೂ ಈ ಕಾರ್ಯಕ್ರಮವು ತಮ್ಮ ಸಂಪ್ರದಾಯದ ಉಡುಗೆ-ತೊಡುಗೆಯಲ್ಲೇ ನಡೆಯಲಿ ಎಂದು ಆಶಿಸುತ್ತೇನೆ.

**ರಮೇಶ್**, ಸಂಗಯ್ಯನಪುರ

**ಅರೆ ಭಾಷಿಕೆ ವಿಭಾಗಿ**

# ಕರಿ ಚೆನ್ನ

## ಧಾರವಾಹಿ - 2

ಮೂಲಕಥೆ : ಅಶ್ವಥ್ ಅರವಿಂದ್

ಅರೆಭಾಷೆಗೆ : ಎಂ. ಇ. ಮಹಮುದ್

ಡ್ರೈವ್ ಮಾಡ್‌ವರಮಧ್ಯ ದೇವಯ್ಯ ಒಂದ್ ಸಿಗರೇಟ್ ಹತ್ತಿಸ್ತ್. ವಿಾರ ರೋಡ್‌ಕಡೆಗೆನೋಡ್‌ಕನ ಮಳೆ ಜೋರಾಗಿ ಸುರಿತಿತ್ತ್. ಮಳೆದ್ ರಭಸಕ್ಕೆ ಕಾರ್ ಎತ್ತಹೋಗ್ತಾ ಉಟ್ಟೊತೇಳಿ ಗೊತ್ತಾತ್ಲೆ.

**ಕಳೆದ ಸಂಚಿಕೆಯಲ್ಲಿ....**

**ಕಾಲೇಜಿಗೆ ಹೋಗ್‌ತ್ತಿದ್ದ ವಿೀರಂಗೆ ಬಸ್ ಇಲ್ಲದೆ ಮನೆಗೆ ಬಾಕೆತ ಬಸ್ ಸ್ಟಾಪ್‌ಲಿ ನಿತ್ತಿದ್ದದೆ. ಅದೇ ಸಮಯಕ್ಕೆ ಬೋರುಗುಡ್ಡೆ ದೇವಯ್ಯ ಕಾರ್ ತಗಂಡ್ ಬಂದ್ ಅವಳ ಹತ್ರ ನಿಲ್ಲಿಸಿ ಬಾ ಮನೆಗೆ ಡ್ರಾಪ್ ಮಾಡ್ನೆ ತೇಳ್ದೆ. ಅವ್ಳಿಗೆ ಇಷ್ಟ ಇಲ್ಲದಿದ್ರು ಮನಸ್ಸಿಲ್ಲದ ಮನ್ಸ್‌ಲಿ ಕಾರ್ ಹತ್ತಿದೆ. ಆಗ ಬೋರುಗುಡ್ಡೆ ದೇವಯ್ಯ ಮನೆಗೆ ಕರ್ಕಂಡ್ ಹೋಗದೆ ಇಷ್ಟ ಬಂದ ಕಡೆ ಕಾರ್‌ನ ಓಡ್ಸಿದೆ.**

**ಮುಂದೆ ಓದಿ....**

"ಏ ಗೂಡೆ ವಿಾರಾ, ನಿಂಗೆ ನನ್ನ ಮೇಲೆ ಏನಾರ್ ಸಂಶಯ ಉಟ್ಟಾ ಹೇಂಗೆ? ಇದ್ದರೆ ಹೇಳಿ ಬುಡ್ ನಿನ್ನಂತ ಎಳೇ ಮೂಳೆಯ ಗೂಡೆಗ ಸುಮ್ಮನೆ ಸಂಶಯ ಪಡುದರ ನಾನ್ ಇಷ್ಟಪಡುದ್ಲೆ"
ದೇವಯ್ಯ ಹೇಳ್ತ್.

"ಕಾರ್ ಮನೆ ದಾರಿಗಾಗಿ ಹೋಗ್ತಾ ಇಲ್ಲೆಲ್ಲಾ ಅದರ ಕೇಳ್‌ದ್ರಲ್ಲಿ ಎಂತ ತಪ್ಪು ಇದ್ದ ?"

ತಪ್ಪು ಸರಿನ ನೀನ್ ನಂಗೆ ಹೇಳಿ ಕೊಡಿಕೇನೂ ಬಾದುಬೇಡ. ಹೇಳ್‌ವರ ಮಾಡಿ ತೋರ್ಸಂವ ಈ ಬೋರುಗುಡ್ಡೆ ದೇವಯ್ಯ, ನೀನ್ ಹೇಳ್ತಾ ಇರೋ ರೋಡ್ ಸರಿ ಇಲ್ಲೆ. ಬರಿ ಗಡಗಡ ರೋಡ್ ಅದ್. ಅಲ್ಲೆ ಹೋದರೆ ಡಬ್ಬಲ್ ಪೆಟ್ರೋಲ್ ಬೇಕ್. ಅಷ್ಟೇ ಅಲ್ಲ ಮತ್ತೆ ವರ್ಕ್‌ಶಾಪ್‌ಗೂ ದುಡ್ಡು ಚೆಲ್ಲೋಕು. ಈಗ ನಾನ್ ಹೋಗಾ ಇರೋ ರೋಡ್ ಸೊಲ್ಪ ಸುತ್ತಾದರೂ ಯಾವ ತೊಂದ್ರೇನೂ ಇಲ್ಲೆ. ಈ ರೋಡ್‌ಗಾಗಿ ಹೋದರೆ ನಮ್ಮ ತಡಿಗೆ ಯಾವ ಉಳ್‌ಕೂ ಇರ್‍ದ್ದಲೆ. ನಿನ್ನ ಮನೆ ಮುಂದೆಕಾರ್ ನಿಲ್ಸಿನೆ, ಜೋರ್ ತೆಗ್ದ್ ಓಡಿಬುಡ್."

ಅಂವ ಭಾರಿ ಒಳ್ಳೆವನಂಗೆ ಹೇಳ್ತ್.
"ನಿಮ್ಮ ಹೋಗಾಟ ನೋಡ್ಕನ ನಂಗೇಕೋ ಬೇಗ ಮನೆಗೆ ಮುಟ್ಟುವ ತರ ಕಾಂಬದ್ಲೆ."

"ಸುಮ್ಮನೆ ಕುದ್ದ್‌ಕನೆ, ಯಾಕೆ ಹೆದ್ರಿಯಾ ? ನಾಡ್‌ಕೊಲ್ಲಿ ಮಾದಪ್ಪನ ಮಗಳಲ್ಲಾ ನೀನ್ ? ಜೊತೆಗೆ ಬಿ. ಎ.ಡಿಗ್ರಿ ಬೇರೆ. ನಿನ್ನೆಲ್ಲ ನಂಗೆ ಎಂತ ಮಾಡಿಕೆ ಆದೆ ಹೇಳ್?" ದೇವಯ್ಯ ನೆಗಾಡ್ತಾ ಹೇಳ್ತ್.

ಅವನ ಕೆಟ್ಟ ನೋಟ ಅವಳ ಮೇಲೆ ಬೀತ್. ಆ ಪೊರ್ಲ್ಲನ ನೋಡದಷ್ಟು ಅವಂಗೆ ಸಾಕಾಗದೇ ಹೋತ್. ದೇವಯ್ಯ ಕಾರ್‌ನ ಸ್ಪೀಡ್ ಕಮ್ಮಿ ಮಾಡ್ತ್.

"ಸ್ಪೀಡ್‌ಲಿ ಹೋದರೆ ನಿಂಗೆ ಹೆದ್ರಿಕೆ ಆದೂಂತ ಹೇಳಿ ಮೆಲ್ಲೆ ಹೋಗ್ತಾ ಒಳೆ."
ಸ್ವಲ್ಪ ಹೊತ್ತ್ ಕಳ್ದ್ ಅಂವ ಕರ್ತ್.
"ಏ ಗೂಡೆ ವಿಾರ......?"

ವಿಾರ ಎಂತದೋ ಗ್ಯಾನ ಮಾಡಿಕಂಡ್ ಕುದ್ದಿತ್ತ್.

"ವಿಾರಾ......"

ಹ್ಞೀಂ ?"

"ನಿನ್ನ ಅಪ್ಪಂಗೆ ಎಂತಾತ್‌ನೆ. ಅವ್ನ ನೋಡಿಕೆ ಆದುಲೆಲ್ಲಾ. ಮತ್ತಿವಿಾನ್ ನಂಗೆ ಒಣಗಿ ಹೋವ್ಟ. ಅವಂದ್ ಒಂದ್ ಕೆಟ್ಟ ಅದೃಷ್ಟ"

ನನ್ನ ಪೊಪ್ಪನ ಅದೃಷ್ಟ ಕೆಟ್ಟರೆ ಅದ್ನ ನಾವ್ ತಾನೆ ಅನುಭವಿಸಕಾದ್. ನಿಮ್ಮ ಅದೃಷ್ಟ ಲಾಯಕ್ ಉಟ್ಟಲ್ಲಾ. ಕಾರ್, ಜೀಪ್, ಬಂಗ್ಲೆ, ಬ್ಯಾಂಕ್, ಬಸ್ಸ್ ಬೇಕಾದ ಆಸ್ತಿ ಉಟ್ಟಲ್ಲಾ...?

"ಏ ಗೂಡೆ ಅದೆಲ್ಲ ನಾನ್ ನನ್ನ ರಕ್ತನ ನೀರ್ ಮಾಡಿ ಚೆನ್ನಾಗಿ ಗೈದ್ ಸಂಪಾದನೆ ಮಾಡ್ದ್ ಗೊತ್ತುಟ್ಟಾ ? ಪಂಡ್‌ಕಾಲಲಿ ಒಳ್ಳೆ ಮೆಣ್ಸ್‌ಮಾರಿ ಪ್ಯಾಂಟ್ ಜೋಬ್‌ಲಿ ನೋಟ್ ತುಂಬಿಸ್ಕಂಡ್ ಇರ್‌ಕನ ಜನ ನನ್ನ ಕಂಡ್ರೆ ಹುಲ್ಲ್‌ನ ತರ. ಕಳ್ಳ್ ಮಾರಂವ್ ಮರ ಕದಿಯಂವ, ಕಾಡ್‌ಕಳ್ಳಾಂತೆಲ್ಲ ಜನಗ ನನ್ನ ಮರೆಲಿ ಹೇಳ್ತಿದ್ದ. ಅದೇ ಈಗ ನೋಡ್ ಬೋರುಗುಡ್ಡೆವು ತೀರ ನನ್ನ ಮುಂದೆ ಕೈ ಕಟ್ಟೆಕಂಡ್ ನಿಂತವೆ. "ಸಾರ್ ಒಂದ್ ಹತ್ತುರೂಪಾಯಿ ಕೊಡೀ"ತ ಹೇಳಿ ಕೇಳ್ವೆ. ಹಿಂದೆ ಈ ಬೋರುಗುಡ್ಡೆಗೆ ಹಾಕಿದ ಬಟ್ಟೆಲಿ ಬಂದ ಈ ದೇವಯ್ಯಂಗೆ ಇಷ್ಟೆಲ್ಲ ಸೊತ್ತು ಆದೇಂತ ಈ ಊರ್‍ನ ನಾಯಿ ಕೂಡ ಗೇನೆ ಮಾಡಿಂಕಿಲ್ಲೆ. ಮೇಲೆ ಕುದ್ದವರ್‍ನ ಅಡಿಗೆ ಹಾಕಕ್ಕು, ಅಡಿಲಿ ಇದ್ದವರ ಕೊಡಿಲಿ ಕೂರ್ಸಕೂ. ದೇವ್ರಿಗೆ ದೊಡ್ಡ ಕೆಲ್ಸ ಅಲ್ಲನೆ ಗೂಡೆ."

ದೇವಯ್ಯ ಹೇಳ್ತ್.
"ನಾವ್ ಎಷ್ಟ್ ಅಡಿಲಿ ಇದ್ರೂ ನಿಮ್ಮಕ್ಕಲೆ ಬೇಡಿಕೆ ಬಾದ್ಲೆ, ಅದ್ ತಿಳ್‌ಕಣಿ. ನಿಮ್ಮ ಒಂದ್ ಸಹಾಯ ಕೂಡಾ ನಾವ್ಗೆ ಬೇಡ."

ವಿಾರ ಅಷ್ಟ್ ಹೇಳ್‌ಕಾಕನ ಕಾರ್ ನಿತ್ತತ್. ಇಂಜಿನ್ ಆಫ್ ಆತ್. ಸೀಗರೇಟ್ ತುಂಡ್‌ನ ಹೊರಗೆ ಬಿಸಾಕಿ ದೇವಯ್ಯ

ಸಮಾಧಾನಲೇ ಹೇಳ್ತ್.

"ನನ್ನ ಸಹಾಯ ಬೇಡದೇ ಹೋದ್ರೆ ನೀನ್ ಈಗಲೆ ಇಳ್ದ್ ಹೋಕ್, ನನ್ನ ಕಾರ್ಗೆ ನಿನ್ನ ನಾನೇ ಕರ್ದ್ ಹತ್ತಿಸಿರೂ ಅದ್ಕೂಡ ಒಂದು ಸಹಾಯುನೆ ತಿಳ್ಕ".

ದೇವಯ್ಯನ ಮಾತ್ಗೆ ಎಂತ ಉತ್ತರ ಹೇಳೊಕುತ ಮೀರಂಗೆ ತಿಳಿಯದೆ ಹೋತ್.

ಏನನೇ... ಇಳಿಯಕೆ ಹೇಳ್ದ್ ಕೇಳ್ತ್ಲೆ.

ಮಳೆ ಕಮ್ಮಿ ಆಗೋ ಹಂಗೆ ಇಲ್ಲೆ. ಎಲ್ಲೆಲ್ಲೂ ಕಾರ್ಗತ್ತಲ್. ಕಾರ್ನ ಅಂವ ಎಲ್ಲಿ ನಿಲ್ಸಿಟ್ಟ್ಯುತ ಕೂಡ ಗೊತ್ಲೆ. ಈಗ ಇಳ್ದ್ ಹೋಗ್ತ ಹೇಳ್ರೆ.. ?

'ನಿಂಗಲ್ಲನೆ ಗೂಡೆ ಹೇಳ್ಟ್ ಇಳ್ದ್ ನಡೀತ.'

ದೇವಯ್ಯ ಮೂರ್ನೇ ಬಾರಿಗೆ ಹೇಳ್ತ್.

ಮೀರ ತಲೆನ ತಗ್ಗಿಸ್ಕಂಡ್ ಕುದ್ದತ್. ಅವಳಿಗೆ ಏನ್ ಮಾಡೊಕೂಂತ ತಿಳ್ಯದೇ ಹೋತ್.

ದೇವಯ್ಯ ಒಂದ್ ಹತ್ತ್ ನಿಮಿಷ ಕಾರ್ನ ನಿಲ್ಸಿ ಅವಳ ಪೊರ್ಲುನ ತಿಂಬ ಹಂಗೆ ನೋಡ್ತ್.

"ಏಗೂಡೆ ನಿನ್ನಂದ ಎಷ್ಟೋ ಲ್ಯಾಕ್ನ ಗೂಡೆಗಳ್ನ ನೋಡ್ದಂವ ಈ ದೇವಯ್ಯ. ನಿನ್ನಪ್ಪಗೈದ್ ಸಂಪಾದ್ನೆ ಮಾಡ್ದಕ್ಕಿಂತ ಹತ್ತ್ ಪಾಲ್ ಹೆಚ್ಗೆ ಸಂಪಾದ್ನೆನೂ ಮಾಡಿದಂವ, ಅಷ್ಟೇ ಖರ್ಚ್ ಮಾಡ್ದವ ಕೂಡ ಹಿಂದೊಂದ್ ಕಾಲಲಿ ಒಂದ್ ಬಟ್ಲ್ ಅಂಬ್ಲಿಗಾಗಿ ತುಟಿ ಒಣಂಗಿಸ್ಕಂಡ್ ನಾನ್ ನಡ್ದದಾರಿಗಾಗಿ ಈಗ ನನ್ನ ಕಾರ್ ಬಸ್ಸ್, ಜೀಪ್ ಎಲ್ಲ ಓಡಾಡ್ತ ಉಟ್ಟು. ಅಂದ್ ಒಣಂಗಿದ ಮೊತ್ತಿನಂತ ಪೊಲೀಸ್ ಪೇದನ ನೋಡ್ಕನ ಹೆದ್ರಿ ಓಡ್ತಾ ಇದ್ದ ನಾನ್ ಇಂದ್ ಎಸ್ಪಿ., ಡಿ.ಐ.ಜಿ. ಮಾತ್ರ ಅಲ್ಲ, ಮಂತ್ರಿಗಳ ಮುಂದೆ ಕೂಡ "ರೆಸ್ಪೆಕ್ಟೆಡ್ ಪರ್ಸನ್" ಆಗಿಯೊಳೆ. ನನ್ನ ದೃಷ್ಟಿಲಿ ನೀನೆಲ್ಲ ಒಂದ್ ಸೊಳ್ಳೆಗೆ ಸಮಾನ ಗೊತ್ತಾ?"

ಅಸ್ಟಹೇಳಿ ಅಂವ ಕಾರ್ ಸ್ಟಾರ್ಟ ಮಾಡ್ತ್.

ಪಿರ್ಕಿ-ದುಷ್ಟ ಇವನ ಕಾರಿಗೆ ಹತ್ತಿಕಾಗದ್ದಿತ್ತ್. ದೇವರ ಸತ ಹಂಗ್ಸೋ ನೀಚ ಇಂವ. ಇವನೊಟ್ಟ್ಯಗ ಕಾರ್ಲಿ ಹೋಗುವ ಬದ್ಲ್ ಕತ್ತಲೆಲಿ ನಡ್ದ್ಕೊಂಡೇ ಹೋಕಿತ್ತ್.

ಮೀರಂಗೆ ತುಂಬ ಬೇಸರ ಆತ್.

ಹಿಂದೆ ಒಳ್ಳೆಮೆಣ್ಸ್ ಫಸಲ್ನ ಸಮಯಲಿ ಬೋರ್ಗುಡ್ಡೆ ಜನಕೆ ಯಾಗೊಳೂ ಹಬ್ಬ. ಮೆಣ್ಸ್ ಕುಯ್ಟ್ ಮಾರುವಲ್ಲಿ ಮರ್ಗೂ ಸಣ್ಣ ಹೈದಂಗಳ ಜೋಬ್ಲಿ ಕೂಡ ದುಡ್ಡೇ ದುಡ್ಡ್. ಬೋರುಗುಡ್ಡೆ ಗಿರಿಯಪ್ಪನ ಕಳ್ಳಂಗಡಿಲಿ ಅಂದ್ ಯಾಗ ನೋಡ್ರೂ ಜನಗಳ ಕ್ಯೂ. ಸಾರಾಯಿ ಪ್ಯಾಕೆಟ್ ಬೇಡದವು ಜೀಪ್ ತಕಂಡ್ ಪೇಟೆಗೆ ಹೋತಿದ್ದೊ. ಬಾರ್ಲಿ ಹೋಗಿ ಕುದ್ದ್ಕಂಡ್ ಕುಡ್ಯಕೆ.

ಟಿ.ವಿ , ವಾಚ್, ರೇಡಿಯೋ, ಫಾರಿನ್ ಸ್ಟೀರಿಯೋ ಸೆಟ್, ಮೋಟಾರ್ ಸೈಕಲ್, ಡೀಸೆಲ್ ಜೀಪ್, ಹಿಂಗೆ ಅವ್ರವ್ರ ತಾಕತ್ತಿಗೆ ತಕ್ಕ ಹಾಂಗೆ ಒಂದೊಂದ್ ವಸ್ತ್ ಬೋರುಗುಡ್ಡೆಯವ್ರ ಮನೆ ಸೇರ್ತಿತ್ತ್.

ಆ ಒಳ್ಳೆಕಾಲ ಜನಗಳ ಬದ್ಕ್ಲಿ ಹೆಚ್ಚ್ದಿನ ನಿಲ್ಲದೇ ಹೋತ್. ಬೋರುಗುಡ್ಡೆಯ ಒಳ್ಳೆಮೆಣ್ಣ್ ಬಳ್ಳಿಗೆ ರೋಗ ಹಿಡ್ತ್. ಕೋಳಿರೋಗ ಬಂದದರಿಂದ ಬಳ್ಳಿ ಒಣಗಿ ಸತ್ತ್ಹೋತ್. ತೋಟ ನೋಡ್ಕನ ಕಣ್ಣ್ಲಿ ನೀರ್ ಬರ್ತಿತ್ತ್. ಓಟ್ ಭಿಕ್ಷೆ ಕೇಳಿಕೆ ಬೋರುಗುಡ್ಡೆಗೆ ಬರ್ಪ ರಾಜಕಾರಣಿಗ ಇನ್ನೊಮ್ಮೆ ಬೋರ್ಗುಡ್ಡೆ ಹತ್ತಿಕೆ ಐದ್ವರ್ಷ ಕಳಿಯೊಕು.

ಮಂತ್ರಿಗಳ ತಾತ-ಮುತ್ತಾತಂದರ್ ಹಿಂದೆ ಉಚ್ಚೆ ಹುಯ್ಯಕೆ ಕುದ್ದಿದ್ದ ಗ್ರಾಮಲಿ ಇಂದ್ ಜನ ಇಲ್ಲದೆ ಹೋದ್ರೂ ಸೂಪರ್ ಡೀಲಕ್ಸ್ ಬಸ್ಸ್ಗಳೇ ಓಡ್ತಾ ಉಟ್ಟು. ಆದರೆ ಪಾಪದ ರೈತನ ಗೋಳ್ನ ಕೇಳವೇ ಇಲ್ಲೆ.

ಕಾಪಿಹೊಡ್ಟ್ ಪರೀಕ್ಷೆ ಬರ್ಟ್ ರ‍್ಯಾಂಕ್ ತಕಂಡಂವ, ಮಾರ್ಕ್ ತಿದ್ದಿ ಎಂ.ಎ. ಪಾಸ್ ಮಾಡ್ದಂವ, ನಾಲ್ಕಕ್ಷರ ಓದಿಕೆ ಗೊತ್ತಿಲ್ದೇ ಹೋದ್ರೂ ಕಾಲೇಜ್ ನಡ್ಸಂವ ಇಂತವೆಲ್ಲ ಇಂದ್ ಜನಗಳ ಪ್ರತಿನಿಧಿಗ

ಬೋರ್ಗುಡ್ಡೆಯ ಒಳ್ಳೆಮೆಣ್ಸ್ ಬಳ್ಳಿಗೆ ರೋಗ ತಗಲಿದ ಸಂಗತಿ ತಿಳ್ದ್ ಕ್ಷೇತ್ರದ ಶಾಸಕ ಮೇದಪ್ಪ ಕೃಷಿ ಮಂತ್ರಿ ಒಟ್ಟಿಗೆ ಪ್ರಸ್ತಾಪ ಮಾಡ್ತ್

ಏನೂ ಪ್ರಯೋಜನ ಇಲ್ಲೆ. ಇದ್ ಕೋಳಿ ರೋಗಾಂತ ವಿಜ್ಞಾನಿಗ ಕಂಡ್ ಹಿಡ್ದ್ ಸರ್ಕಾರಕ್ಕೆ ವರದಿ ಕೊಟ್ಟದ್ರಿಂದ ರಾಜ್ಯ ಸರ್ಕಾರ ನಷ್ಟಕ್ಕೊಳಗಾದ ರೈತರಿಗೆ ತಲಾ ಐನೂರ್ ರೂಪಾಯಿ ಪರಿಹಾರ ಕೊಟ್ಟವೇತ ಹೇಳ್ತ್.

ಖಜಾನೆಲಿ ದುಡ್ಡ್ ಇಲ್ಲದ್ರಿಂದ ಕೊಡಿಕೆ ಆಗದೆ ಹೋತ್. ಕೇಂದ್ರ ಸರಕಾರದ ದುಡ್ಡ್ ಬಾಕನ ಕೊಡುಮಾಂತ ಹೇಳಿ ಮುಖ್ಯಮಂತ್ರಿ ಆ ವಿಚಾರಕೆ ತಲೆ ಕೊಡ್ದೇ ಹೋತ್.

ಬೋರುಗುಡ್ಡೆ ಬೆಳೆಗಾರರ್ರಿಗೆ ಆಸೆ ನಿರಾಸೆ ಆತ್. ಜೀವನಕ್ಕೇ ಕಷ್ಟ ಆತ್. ಬಡ್ಡಿಗೆ ಬಡ್ಡಿ ಸೇರಿ ಬ್ಯಾಂಕ್ ಲೋನ್ ಹೆಚ್ಚಿತ್. ಬ್ಯಾಂಕ್ಂದ ಬಂದ ಜಪ್ತಿ ನೋಟಿಸ್ ನೋಡಿ ಹಗ್ಗ ತಕ್ಕಂಡ್ ಸತ್ತವೂ, ಊರ್ಬುಟ್ಟವೂ ಒಳೊ.

(ಸಶೇಷ)

## ನ ಗೆ ಹ ನಿ

ಮಾಸ್ಟ್ರ: ಪಾಠ ಎಲ್ಲಾ ಮುಕ್ತ್, ಏನಾರ್ ಕೇಳಿಕೆ ಇದ್ದರೆ ಕೇಳಕ್

ಹೈದ: ಗಂಟೆ ಆಕೆ ಎಷ್ಟ್ ಹೊತ್ತು ಉಟ್ಟು ಸಾರ್?

# ಹುಟ್ಟುಗುಣ ಸುಟ್ಟರು ಬುಡ್ದಲೆ

**ಜೀ**ವಲಿರ್ಾಕನ ಊರವರ್ನೆಲ್ಲ ಗೋಳ್ ಹೊಯ್ಕಂಡ್ ತೀರ್ದಷ್ಟ್ ತೊಂದರೆ ಕೊಟ್ಟಂವ ಹೆಣಾಗಿ ಮಲ್ಗಿರೂ ಹಿಂಗೆ ಮಾಡಿರ್ದ್ದತ ಯಾರ್‌ಗೇನಮಾಡಿಯೊಳೊ? ಅವನೇ ನಾರಾಯಣ ಬಟ್ಟ. ಸತ್ತ್ ಹತ್ತ್ ವರ್ಷಾತ್. ಇನ್ನ್ ನಂಗೆ ಯಾವ ತೊಂದರೆ ಆಕಿಲೆತಾ ಧೈರ್ಯಲಿ ಬರ್ದನೆ. ಅಂವ ಇರ್ಾಕನ ಊರವುಕೆ ಕೊಟ್ಟ ಕಷ್ಟ ಒಂದಾ ಎರಡ? ಯಾರಾರ್ ಪಾಪದವು ಮನೆಗೆ ತೇಳಿ ಮರಕೊಯ್ಸಿಕೆ ಗೇನಮಾಡ್ರೆ ಮರ ಕಡ್ಡ್ ದಡೆಗೆ ಏರಿಸಿಕೆ ಮುಂದೆ ಖಾಕಿಗ ಹಾಜರ್. ಮದುವೆಗೊ, ತಿಥಿಗೊ ಸ್ವಲ್ಪ ಸರಾಯಿ ಕಾಸಿಕಣೆತೇಳ್ರೆ ಬೆಲ್ಲ ನೀರಿಗೆ ಹಾಕಿಕೆ ಮುಂದೆ ಸ್ಕ್ವಾಡ್‌ನವು ರೆಡಿ. ಯಾರಾದರ್ ಸತ್ತದರಲಿ ಸಂಶಯ ಉಟ್ಟ್ ತಾವರೆ ಊರವರ ಬೆನ್ನ್ ಪೂರ ಹೊಡಿ. ಇದೆಲ್ಲ ಆ ನಾರಾಯಣನ ಮಹಾತ್ಮೆ. ಆದ ರೇನ್ ಮಾಡ್ದ್ ಅವಂಗೆ ಎದ್‌ರ್ ನಿಲ್ಲುವ ಧೈರ್ಯ ಯಾರಿಗುಟ್ಟ್? ಹಂಗೆ ಸ್ವಲ್ಪ ಧೈರ್ಯಲಿ ನಿತ್ತವು ಇಬ್ಬರು. ಒಬ್ಬ ರಾಮಯ್ಯಬಂಟ ಮತ್ತೊಬ್ಬ ಗಣಪತಿ ಮಾವ, ಅವರ ಕತೆಯೇನಾತ್ ನೋಡಿ.

ರಾಮಯ್ಯಬಂಟಂಗೂ ನಾರಾಯಣ ಬಟ್ಟಂಗೂ ತೋಟಕೆ ಬರ್‌ವ ನೀರ್ನ ವಿಷಯಲಿ ಬಾರಿ ಜಟಾಪಟಿಯಾತ್. ಬಂಟ ಒಂದು ದಿನ ಬಟ್ಟರಿಗೆ ಸಕತ್ ರೋಪ್ ಹಾಕಿತ್. ತೋಟಕ್ಕೆ ನೀರ್ ಬುಡಿಕಿಲೆ ತೇಳಿ ನೀರ್‌ಕಟ್ಟಿತ್. ನೀನ್ ಮಾಡುವರ ಮಾಡ್‌ತ್ತೇಳಿ, ಸೀದಾ ಕನ್ನಡ ಜಿಲ್ಲೆಗೆ ಹೋಗಿ ಒಂದು ಲಾರಿ ತುಂಬಾ ರೌಡಿಗಳ ಕರ್ಕಂಡ್ ಬಂದ್ ಮನೆಲಿ ಇರ್ಸಿಕಣ್ತ್. ಬಟ್ಟನೇನ್ ಕಮ್ಮಿನ. ಅವನು ಊರುನವುಕೆ ಗೊತ್ತಾಗುವಂಗೆ ಒಂದು ಜೀಪು ತುಂಬಾ ಜನಗಳ ಕರ್ಕಬಾತ್. ಬಂಟನ ಮನೆಲಿ ಯಾಗಳು ಗೌಜಿಗದ್ದಳ. ರೌಡಿಗಳ ಸಾಕುದುತೇಳ್ರೆ ಏನ್ ಚಿಲ್ಲರೆ ವಿಷಯನ? ಒಂದು ತಿಂಗ ಕಳಿಯಕಾಕನ ರಾಮಯ್ಯಬಂಟನ ಆಸ್ತಿ ಮಾರಿರು ಸಾಕಾಗದಷ್ಟ್ ಸಾಲನೂ ಆತ್. ಇಲ್ಲಿ ಬಟ್ಟನ ತಲೆ ನೋಡಿ! ಅಂವ ರೌಡಿಗಳತೇಳಿ ಕರ್ಕಂಡ್ ಬಂದದ್‌ಯಾರ್ನ? ಪೂರ ಕೆಲಸದವರ. ಒಂದು ತಿಂಗಳಲಿ ಐದ್

**ರಾಜ ಚೆರಿಯಮನೆ, ಜೋಡುಪಾಲ**

ಏಕ್ರೆ ಹೊಸ ತೋಟ ಮಾಡಿಕಣ್ತ್. ಬಂಟ ಮತ್ತೆ ಜೀವಮಾನಲಿ ತಲೆ ಎತ್ತಿಕಾಗದೆ ಆದೆ ಬಟ್ಟಂಗೆ ಆಸ್ತಿಮಾರಿ ಊರ್ ಬುಟ್ಟಿತ್.

ಇನ್ನ್ ನಮ್ಮ ಗಣಪತಿ ಮಾವಂಗೂ, ಬಟ್ಟಂಗೂ ನಡೆಯುವ ದಾರಿನ ವಿಷಯಲಿ ಜಗಳ ಹತ್ತಿಕಣ್ತ್. ಕೇಸ್ ಕೋರ್ಟ್ ವರೆಗೂ ಹೋತ್ ನ್ಯಾಯ ಮಾವನ ಕಡೆ ತೀರ್ಮಾನ ಆದುತ ಬಟ್ಟಂಗೆ ಗೊತ್ತಾತ್. ಆಗಲೇ ಬಟ್ಟನ ತಲೆ ಕೆಲ್ಸಮಾಡ್ತ್. ಸಾಯಂಕಾಲ ಆಕಾಕನ ಸೀದಾ ಗಣಪತಿ ಮಾವನ ಮನೆಗೆ ಹೋತ್. ಆಗ ಅವು ಸ್ವಲ್ಪ ಏರಿಸಿದ್ದವೆ. ಗುಂಡಿಗೆ ಬೀಳ್ಸದು ಸುಲಭತೇಳಿ ಬಟ್ಟಂಗೆ ಗೊತ್ತುಟು. ಬಟ್ಟ ಬಂದರ ನೋಡಿ ಮಾವಂಗೆ ಆಶ್ಚರ್ಯ ಆತ್. ಅವುಕೆ ಕೋರ್ಟ್‌ಲಿ ಕೇಸ್ ಇದ್ದರೂ ಮಾತ್‌ಕತೆ ಇತ್ತ್. ಕಷ್ಟ - ಸುಖ ಎಲ್ಲಾ ಮಾತಾಡಿ ಬಟ್ಟ ವಿಷಯಕ್ಕೆ ಬಾತ್. ಅಲ್ಲ, ಗಣಪತಿಯವರೆ ಕೋರ್ಟ್‌ಲಿ ಕೇಸ್ ಎಲ್ಲಾ ಅನವಶ್ಯಕ ಅಲ್ಲವೆ? ಸುಮ್ಮ ನಾವರಲ್ಲವೆ ವಕೀಲರಿಗೆ ಹಣ ತಿನ್ನಿಸುವುದು. ನಾನು ಇನ್ನು ದಾರಿ ವಿಷಯದಲ್ಲಿ ತೊಂದರೆ ಕೊಡುವುದಿಲ್ಲ. ನಾವು ನಾಳೆ ಮಡಿಕೇರಿಗೆ ಹೋಗಿ ಕೇಸ್ ಹಿಂದಕ್ಕೆ ಪಡೆಯುವ, ರೆಕಾರ್ಡ್‌ಗಳನ್ನೆಲ್ಲಾ ಬೆಂಕಿಗೆ ಹಾಕಿಬುಡುವ ಇಬ್ಬರಿಗೂ ನೆಮ್ಮದಿ ಅಲ್ಲವೆ?" ತೇಳ್ತ್. ಬಟ್ಟನ ಕಂತ್ರಿ ಬುದ್ಧಿ ಮಾವನ ತಲೆಗೆ ಹೋತ್ಲೆ. ಅವುಕು ದುಡ್ಡ್ ಖರ್ಚ ಮಾಡಿ ಸಾಕಾಗಿತ್ತ್, ಗಣಪತಿಮಾವ ಆದುತ ತಲೆ ಅಲ್ಲಾಡಿಸಿದೊ. ಇಬ್ಬರೂ ಬೆಳಿಗ್ಗೆ ಸ್ವಾಮಿ ಬಸ್ಸ್‌ಗೆ ಮಡಿಕೇರಿಗೆ ಹೋದುತೇಳಿ ತೀರ್ಮಾನಾತ್.

ಮಡಿಕೇರಿಗೆ ಇಬ್ಬರೂ ಒಟ್ಟಿಗೆಹೊದೋ. ಬಸ್ಸಿಗೆ ದುಡ್ಡ್ ಬಟ್ಟನೇ ಕೊಟ್ಟತ್. ಟೋಲ್‌ಗೇಟ್‌ಲಿ ಇಳ್ದ ಮಾವ ಸೀದಾ ಲಾಯರ್ ಹತ್ರ ಹೋದೊ. ವಿಷಯನೆಲ್ಲ ಮಾತಾಡಿ ಲಾಯರ್ ಎಷ್ಟ್ ಬೇಡತೇಳ್ರೊ ಕೇಳದೆ ಸಾಯಂಕಾಲ ಆಕಾಕನ ಎಲ್ಲಾಸರಿ ಮಾಡಿಕಂಡ್ ಫೈಲ್‌ನ ಹಿಡ್ಕಂಡ್ ಸೀದಾ ಬಟ್ಟನ ಮನೆಗೆ ಹೋದೊ. ಬಟ್ಟನೂ ರೆಕಾರ್ಡನ ಒಂದು ಕವರ್‌ಲಿಹಾಕಿಹಿಡ್ಕಂಡ್ ಇತ್ತ್ ಇಬ್ಬರೂ ರೆಕಾರ್ಡ್‌ಗಳ ಒಟ್ಟಿಗೆ ಇಟ್ಟೊ. ಗಣಪತಿಮಾವನೆ ಕಡ್ಡಿಗೀರಿ ಬೆಂಕಿ ಕೊಟ್ಟೊ. ಅದೇ ಬೆಂಕಿಂದ ಒಂದುಸಿಗರೇಟ್ ಹೊತ್ತಿಸಿ ಹೊಗೆ ಬುಟ್ಟ್ ನೆಮ್ಮದಿಂದ ಉಸರುಬುಟ್ಟೊ. ಬಟ್ಟ ಒಳಗೊಳಗೆ ನೆಗಾಡ್ತ್. ಅಲ್ಲಿಂದ ಮೂರು ತಿಂಗದ ವರೆಗೂ ಬಟ್ಟನೂ, ಮಾವನೂ ಜೂನ್ ಜುಲೈನಂಗೆ ಇದ್ದೊ. ಊರವೆಲ್ಲ ಬಟ್ಟನ ದೂರ್‌ಕಾಕನ ಮಾವ ಹೊಗ್‌ಳಿಕೆ ಸುರು ಮಾಡ್ದೊ. ಬಟ್ಟನೊಟ್ಟಿಗೆ ಸೇರಿಕಂಡ್ ಅವುಕೆ ಆಗದವರ ಮೇಲೆ ಕಿತಾಪತಿನು ಮಾಡಿಕೆ ಸುರುಮಾಡ್ದೊ. ಒಂದು ದಿನ ಗಣಪತಿಮಾವ ಮಗಳ ಮನೆಗೆ ಹೋಗಿ ಎರಡ್ ದಿನ ಇದ್ದ್ ಬಂದೋ. ಅಷ್ಟೊತ್ತಿಗೆ ಬಟ್ಟ ಇಲ್ಲಿ ದಾರಿಗಡ್ಡ ಆರಡಿ ಎತ್ತರಲಿ ಬೇಲಿ ಹಾಕಿಸಿತ್ತ್. ಮಾವಂಗೆ ಒಂದು ತಲೆಗೆ ಹೋತ್ಲೆ. ಸೀದಾ ಬಟ್ಟನ ಮನೆಗೆ ಹೋದೊ. ಬಟ್ಟ ಮಾವನ ನೋಡಿ ನೋಡ

ದವರರಿಗೆ ಮಾಡ್ತ್. ಮಾವ ವಿಷಯ ಎಂತದ್‌ತ ಕೇಳಿಕೆ ಮುಂದೆ ಬಟ್ಟ ಜಡ್ಜ್‌ಮೆಂಟ್ ಕಾಪಿನ ಹಿಡ್ಕಬಾತ್. ಕೇಸ್ ಬಟ್ಟನ ಪರ ತೀರ್ಮಾನಾಗಿತ್ತ್. ಮೂರು ತಿಂಗ ವಾಯ್ದೆ ಮೀರಿದರ್‌ಂದ ಅಫೀಲ್ ಮಾಡುವ ಛಾನ್ಸ್ ಇತ್ತ್‌ಲೆ. ಗಣಪತಿ ಮಾವ ಆಕಾಶನೇ ತಲೆ ಮೇಲೆ ಬಿದ್ದಂಗೆ ಅಲ್ಲೇ ನೆಲಕ್ಕೆ ಅಡ್ಡಬಿದ್ದೊ, ಸಂಗತಿ ಎಂತದ್‌ತೇಳ್ರೆ ಮಾವ ಕೇಸ್ ಹಿಂದಕ್ಕೆ ತೆಗ್ದ್ ಒರಿಜನಲ್ ರೆಕಾರ್ಡ್ಸ್‌ಗಳ ಸುಟ್ಟೆದ್. ಬಟ್ಟ ಡೂಪ್ಲಿಕೇಟ್ ಕಾಪಿ ತೆಗೆದ್ ಸುಟ್ಟೆದ್!

ಇಷ್ಟೆಲ್ಲ ಆದ ಮೇಲೆ ಬಟ್ಟ ಊರಿಗೆಲ್ಲ ತಾನೆ ಅರಸತೇಳುವಂಗೆ ಮೆರೆಯಕೆ ಸುರು ಮಾಡ್ತ್. ಕಾಲಚಕ್ರ ತಿರ್‌ಗ್ತನೆಇತ್ತ್. ಬಟ್ಟಂಗೆ ವಯಸ್‌ನೂ ಆತ್. ಕೆಮ್ಮ-ದಮ್ಮ ಕಾಯಿಲೆ ಒಟ್ಟೆಗೆ ಹಿಡ್ಕಂಣ್ತ್. ಇಂದೋ ನಾಳೆನೋತ ದಿನ ಲೆಕ್ಕ ಹಾಕಿಕೆ ಸುರುಮಾಡ್ತ್. ಒಂದು ಸಂತೆ ದಿನ ಬಟ್ಟ ಊರವರ್ನೆಲ್ಲ ಸೇರಿಸಿ ಹೇಳ್ತ್. ನಾನ್ ಇನ್ನ್ ಹೆಚ್ಚ್ ದಿನ ಬದುಕುದುಲೆ. ನಾನ್ ನಿಮಿಗೆಲ್ಲ ತುಂಬಾ ಉಪದ್ರಕೊಟ್ಟೊಳೆ. ಈಗ ನಂಗೆ ಪಶ್ಚಾತ್ತಾಪ ಆದೆ. ನಂಗೆ ಖಂಡಿತಾ ಸ್ವರ್ಗ ಸಿಕ್ಕಿಕಿಲೆತ್ತೇಳಿ ಕಣ್ಣೀರ್ ಹಾಕಿತ್. ನನ್ನಂದ ಯಾರಿಗೆಲ್ಲ ತೊಂದರೆ ಆವುಟು ಅವೆಲ್ಲ ನಾನ್ ಸತ್ತ್ ಮೇಲೆ ನನ್ನ ಹೆಣನ ಮನೆಗೆ ಮೂರು ಸುತ್ತುನೆಲಲಿ ಎಳೆಯಕು. ಅಂದರೆ ಮಾತ್ರ ಪ್ರಾಯಶ್ಚಿತತ್ತೇಳಿ ಎಲ್ಲರ ಒಪ್ಪಿಸಿತ್.

ಆಟೆ ತಿಂಗಳ ಒಂದು ದಿನ ಬಟ್ಟ ನೆಗ್ದ್ ಬೀತ್. ಸಾವುನ ಸುದ್ದಿ ಕೇಳಿ ಊರವೆಲ್ಲ ಸೇರ್ದೊ. ಬಟ್ಟಂದಾಗಿ ಕಷ್ಟ-ನಷ್ಟ ಅನುಭವಿಸಿದವೆಲ್ಲ ಸೇಡ್ ತೀರ್ಸಿಕಂಬಕೆ ಇದೇ ಕಾಲತ್ತೇಳಿ ಬಟ್ಟ ಹೇಳ್ದಂಗೆ ಮನೆಗೆ ಸುತ್ತು ಬಟ್ಟನ ಹೆಣನ ಎಳೆಯಕೆ ಸುರುಮಾಡ್ದೊ. ಒಂದ್ ರೌಂಡ್ ಎಳ್ದ್ ಎರಡನೆ ರೌಂಡ್ ಎಳೆಯಕಾಕನ ಪೋಲೀಸ್‌ಜೀಪ್ ಬಂದ್ ನಿತ್ತತ್. ಇನ್ಸ್‌ಪೆಕ್ಟರ್ ಇಳ್ದ್. ಹೆಣನ ನೆಲಲಿ ಎಳೆಯೋದರ ನೋಡಿ ಅವರ್ನೆಲ್ಲ ಜೀಪಲಿ ತುಂಬಿಸಿಕಂಡ್, ಇಬ್ಬರು ಪೋಲೀಸ್‌ನವರ ಅಲ್ಲಿ ಬುಟ್ಟ್, ಸೀದಾ ಸ್ಟೇಷನ್‌ಗೆ ಹೋತ್. ಅಂದ್ ರಾತ್ರಿ ಎಲ್ಲಾ ಸ್ಟೇಷನ್‌ಲೆ ಕಳ್ದ್. ಮಾರನೇ ದಿನ ಬಾಕಾಕನ ಎಲ್ಲರ ಕೈಯಲಿ ಒಂದೊಂದು ಕುಪ್ಪಿ ಕಡ್‌ಂಜದೆಣ್ಣೆಉಟ್ಟ್ ಮೈಕೈಬೇನೆಗೆ ಉಜ್ಜಿಕಂಬಕೆ.

ಮತ್ತೆ ನಂಗೆ ಗೋತ್ತಾದ ವಿಷಯ ಎಂತದ್‌ತಹೇಳ್ನೆ ಕೇಳಿ. ಈ ಬಟ್ಟ ಸಾಯುವ ಕಾಲಲಿ ಪೋಲೀಸ್ ಸ್ಟೇಷನ್‌ಗೆ ಹೋಗಿ ನಾನ್ ಇರ್ರಾಕನೆ ಊರವೆಲ್ಲ ಸೇರಿಕಂಡ್ ನಂಗೆ ಕೊಡುವ ಕಷ್ಟ ಎಲ್ಲಾ ಕೊಟ್ಟೊ. ನಾನ್ ಸತ್ತ ಮೇಲೆ ನನ್ನ ಹೆಣನ ಸನ ಬುಡಿಕಿಲೆ. ಬಟ್ಟನ ಹೆಣನ ನೆಲಲಿ ಎಳೆಯದೆ ಬುಡಿಕಿಲೆತೇಳಿ ಮಾತನಾಡಿಕಣ್ತೊಳೋ. ಅದ್ಕಾಗಿ ನನ್ನ ಸಾವು ದಿನ ಬಂದ್ ಅಂತ್ಯ ಸಂಸ್ಕಾರ ನಡೆಯುವವರೆಗೆ ರಕ್ಷಣೆ ಕೊಡೊಕುತೇಳಿ ಪುಕಾರ್ ಕೊಟ್ಟಿತ್!

ಈ ನಾರಾಯಣ ಬಟ್ಟನಂತ ಜನಗ ಈಗಲೂ ಒಳೋ ನಮ್ಮ ನಿಮ್ಮ ಮಧ್ಯಲಿ. ಅದ್ಕೆ ನಾಹೇಳ್ವು ನಾವಿರಕು ಇನ್ನ್ ಮುಂದೆ ಬಾರಿ ಜಾಗ್ರತೆಲಿ. ●

## ಹಾಸ್ಯ ಲೇಖನ

ಊರ್ಲಿ ತುಂಬಿ ಹೋಗ್ಯೊಳೊ ಕಂತ್ರಿ ನಾಯಿಗ
ದೊಡ್ಡ ಡೊಡ್ಡ ಕರಿಯ, ಬಿಳಿಯ, ಕ್ರಾಸ್ ನಾಯಿಗ
ನೋಡ್‌ಕಾಕನ ಹೆದ್ರಿಕೆ ಆದೆ, ಇವು ಕಚ್ಚಿಬುಡ್
ವಾಂತ ಬೊಗ್ಳುದು ಕೇಳಿರೆ ಯಾರ್‌ಹೇಳ್‌ವೊ ಇವು
ತಿಂದ್‌ಬುಡ್‌ವೊಂತ
ಗುರ್ತ್ ಇಲ್ಲದ ಜನುಗ ಕಂಡರೆ ಹೆದರಿ ಓಡೊಕು
ನಾವುಗೆ ನೋಡಿ ನೋಡಿ ಅಬ್ಬೆಸ ಆಗುಟು ಇಂತ ನಾಯ್ಗಳ
ಮೊದುವೆ ಗಿದುವೆ ಇದ್ದರೆ ಇವು ಓಡಿ ಬಂದವೆ
ಇವ್ಕೆ ನಮ್ಮ ಹಾಂಗೆ ಮದುವೆಗೆ ಹೋಕೆ ಕಾಗದ ಬೇಕ್‌ಯಾ?
ಮುನ್ಸಿಪಾಲಿಟಿಯವು ಹೀಂಗೆ ಸುಮ್ಮನೆ ಕುದ್ದರೆ
ಹೇಂಗೆ ಆದುಯಾ?
ಏನೇ ಆದರೂ ನಾ ಹೆದ್ರಿ ಕುದ್ರಿಕಿಲೆ ಯಾಕೆ ಗೊತ್ತುಟಯಾ
ನಾವು ಬಾವ ದಾರಿಲಿ (ಹಾದಿ) ಇವು ತುಂಬಿ ಹೋಗೊಳೊಯಾ
ಅದ್ದಕ್ಕಾಗಿ ಇವ್ಕೆ ನೀವು ನಿಲ್ಲ್‌ಬೊಡಿಯಾ...
ಯಾಕೆ ಗೊತ್ತುಟಾ...?
ಇವ್ಕೆ ಬೆಪ್ರೀ ಬೊಗಳ್‌ದೂಂತೇಳ್ರೆ ಮಾತ್ರ ಗೊತ್ತುಟುಯಾ
ಬೊಗ್ಳುವ ನಾಯ ಕಚ್ಚುದ್ಲೇ ಅಂತೇಳಿ ಎಲ್ಲೊವ್ಕೂ
ಗೊತ್ತುಟುಯಾ

**ಪರ್ಲಕೋಟಿ ಗೋಪಾಲ ರಾಧಾಕೃಷ್ಣ,**
ಬಿಳಿಗೇರಿ ಗ್ರಾಮ

## ನ ಗೆ ಹ ನಿ

ಕಾಳ ಕೇಳ್ತ್ : ಬೋಳ, 20 ಜಿಲ್ಲೆಗಳೊಟ್ಟಿಗೆ ಪುನಃ 7 ಜಿಲ್ಲೆಗಳ ಸೇರಿಸಿಕೆ ಹೊರ್‌ಟೊಳೋ.

ಆಗ ಬೋಳ ಹೇಳ್ತ್ : ಅಲ್ಲರಾ, 20 ಜಿಲ್ಲೆಗಳ ಹೆಸರೇ ನಂಗೆ ಬಾಯಿಪಾಠ ಬಾಲೆ. ಇನ್ನೂ ಆ 7 ಜಿಲ್ಲೆಗಳನ್ನ ಹೇಂಗೆ ಬಾಯಿಪಾಠ ಮಾಡ್ದು, ನಂಗೆ ಗೊತ್ತಾಲೆ.

**ಮೊಟ್ಟೀರ ಹೇಮ ಬಾಲಕೃಷ್ಣ,** ಹೆರವನಾಡು

## ಸಂಗಾತಿ ಲೇಖಕರಲ್ಲಿ ವಿನಂತಿ

ಪ್ರಿಯ ಓದುಗರೆ,

ತಾವು ಬರೆದು ಕಳುಹಿಸುವ ಲೇಖನಗಳು, ಕಥೆಗಳು, ಸಣ್ಣಕಥೆಗಳನ್ನು ಹಾಳೆಯ ಒಂದೇ ಬದಿಯಲ್ಲಿ ಓದಲು ಸಾಧ್ಯವಾಗುವಂತೆ ಸ್ಪಷ್ಟವಾಗಿ ದುಂಡಾಗಿ ಬರೆಯಬೇಕು ಇಲ್ಲವೆ ಟೈಪು ಮಾಡಿ ಕಳುಹಿಸಿಕೊಡಿ.

ನೀವು ಬರೆಯುವ ಕಾಲ್ಪನಿಕ ಕಥೆಗಳು ಬೇರೆಯವರ ಮನಸ್ಸಿಗೆ ನೋವಾಗದಂತೆ ಇರಬೇಕು. ವ್ಯಕ್ತಿಗಳನ್ನು ಉದ್ದೇಶ ಪೂರ್ವಕವಾಗಿ ನಿಂಧಿಸಿ ಬರೆದರೆ ಅಂತವುಗಳನ್ನು ಪ್ರಕಟ ಮಾಡುವುದಿಲ್ಲ. ಕೈತಪ್ಪಿ ಅಂತಹ ಲೇಖನ ಪ್ರಕಟವಾದರೆ ಕಾನೂನಿನ ಎಲ್ಲಾ ರೀತಿಗೂ ತಾವೇ ಹೊಣೆಗಾರರು.

ಬೇರೆಯವರ ಕಥೆ, ಲೇಖನಗಳನ್ನು ಬರೆದರೆ ಮೂಲ ಲೇಖಕರ ಅನುಮತಿ ಪತ್ರ ಕಳುಹಿಸಿಕೊಡಬೇಕು. ಲೇಖಕರು ತಮ್ಮ ಪೂರ್ಣ ವಿಳಾಸವನ್ನು ಬರೆಯದಿದ್ದರೆ ಅಂತಹವರ ಲೇಖನಗಳನ್ನು ಪ್ರಕಟಿಸಲಾಗುವುದಿಲ್ಲ. ಸರಿಯಾದ ಅಂಚೆ ಚೀಟಿಯನ್ನು ಅಂಟಿಸಬೇಕು.

---

## 'ಹೆಣ್ಣ್‌ನ ಶೀಲಕ್ಕೆ ಸಿಕ್ಕಿದ್ ಬರೀ ಎರ್ಡ್‌ವರೆ ಸಾವಿರ ರೂಪಾಯಿ'

ಮೇಲ್ಕಾಣಿಸಿದ ತಲೆ ಬರಹವುಳ್ಳ ಪ್ರತಿಯೊಂದು ಮಾರ್ಚಿ 1-15, 98ರ ಸಂಚಿಕೆಯಲ್ಲಿ ಪ್ರಕಟವಾಗಿದ್ದು ಸರಿಯಷ್ಟೆ. ಅದು ಯಾವುದೇ ಸತ್ಯಘಟನೆಯಾಗಿರುವುದಿಲ್ಲ. ಅಲ್ಲದೆ ಅದರಲ್ಲಿ ಬರುವ ವ್ಯಕ್ತಿಗಳ ಹೆಸರುಗಳು ಉದ್ದೇಶಿತ ದೋಷಪೂರಿತವಾದವುಗಳಲ್ಲ. ಅದರಲ್ಲಿ ಬಂದಿರುವ 'ಅಂಗಡಿ ರಾಘವಯ್ಯ' ಎಂಬ ಹೆಸರು ಸದರಿ ವ್ಯಕ್ತಿ ಬಿ. ಎಂ. ರಾಘವಯ್ಯ ಎಂಬುವವರಿಗೆ ಸಂಬಂಧಿಸಿದುದಲ್ಲ.

ಈ ಮೇಲೆ ಹೇಳಿರುವ ತಲೆ ಬರಹದ ಪ್ರತಿಯು ಯಾವ ರೀತಿಯಲ್ಲೂ ಪರಿಷ್ಕೃತ ವ್ಯಕ್ತಿಗೆ ಸಂಬಂಧಿಸಿದುದಲ್ಲ. ಇದರಿಂದಾಗಿ ಆ ವ್ಯಕ್ತಿಗೆ ಆಗಿರುವ ಮಾನಸಿಕ ಹಿಂಸೆ ಹಾಗೂ ಆಘಾತಕ್ಕೆ ಕ್ಷಮೆ ಯಾಚಿಸುತ್ತೇನೆ

**ಬೋಳನ ಪ್ರೇಮ, ಮಾಲಂಬಿ**
ಸೋಮವಾರಪೇಟೆ

K·R.N.N. 240



---

# ಧನ್ಯವಾದಗಳು

**ದಂಬೆಕೋಡಿ ಎಸ್. ಪೂವಯ್ಯ ಶ್ರೀಮಂಗಲ, ಚೆಟ್ಟಳ್ಳಿ, ಇವರು ಕೊಡಗು ಸಂಗಾತಿಯ ಜೀವಾವಧಿ ಸದಸ್ಯತ್ವ ರೂ. 1000 ಕೊಟ್ಟು ಪತ್ರಿಕೆಯ ಬೆಳವಣಿಗೆಗೆ ಸಹಕರಿಸಿದ್ದಾರೆ. ಇವರಿಗೆ ಬಳಗದ ಧನ್ಯವಾದಗಳು.**

---

## ಉಚಿತ ಸಂಗಾತಿಯನ್ನು ಪಡೆಯಿರಿ

ಪ್ರಿಯ ಓದುಗರೆ, ನಿಮಗೊಂದು ಬಹುಮಾನ ಗೆಲ್ಲುವ ಸುವರ್ಣ ಅವಕಾಶ, ನೀವು 'ಕೊಡಗು ಸಂಗಾತಿ' ಪತ್ರಿಕೆಗೆ ಹೊಸದಾಗಿ ಹತ್ತು ಜನ ಸದಸ್ಯರನ್ನು ನೇಮಿಸಿ ಕೊಟ್ಟರೆ ನಿಮಗೆ ಒಂದು ವರ್ಷದವರೆಗೆ ಉಚಿತವಾಗಿ ಕೊಡಗು ಸಂಗಾತಿ ವಾರ್ಷಿಕ ಪತ್ರಿಕೆಯನ್ನು ಕಳುಹಿಸಿಕೊಡಲಾಗುವುದು. ಈ ಸದಾವಕಾಶವನ್ನು ಪಡೆದುಕೊಳ್ಳಲು ಕೋರಲಾಗಿದೆ.

ಸಂಪಾದಕಿ

Printed by M K Thammaiah and Published by Kodagu Sangathi on behalf of Pattada P. Sheelamani and Printed at ASHIRWAD PRINTERS, 180/A, 6th Main, Vinayakanagar, Mysore-21 Published at Mysore, Editor PATTADA. P. SHEELAMANI, No. 35, 1st Cross, 4th Block (Near Divisional Telephone Office) Jayalakshmipuram, Mysore-570 012 Phone ; 516771